


# ನ್ಯೂಟ್ರಿನ್ ರೋಲ್ಸ್,
# ಆಹಾ! ಅದೆಷ್ಟು ತಾಜಾ,
# ಹೊಸ ರುಚಿ!










ಅತ್ಯಧಿಕ ಶ್ರೇಣಿಯಲ್ಲಿ, ಕರಕರನೆ
ಸವಿಯಲು, ಮಧುರ ರೋಲ್‌ಗಳು






CAS/NC/56/81 KAN A

ಪ್ರತಿನಿತ್ಯವು ಮಿಠಾಯಿಯ-
ರಸದೌತಣ ನಂಬಾಯಿಯ!




ನ್ಯೂಟ್ರಿನ್ ಕನ್‌ಫೆಕ್ಷನರಿ ಕಂಪನಿ ಲಿಮಿಟೆಡ್, ಚಿತ್ತೂರು-517 002 (ಆಂಧ್ರಪ್ರದೇಶ್)

# ಕ್ಷಣದಲ್ಲಿ ಉಲ್ಲಾಸ, ಫ್ಲಾಶ್‌ನಿಂದ







**ಫ್ಲಾಶ್**
**ಟೂತ್‌ಪೇಸ್ಟ್**

**ಫ್ಲಾಶ್ ಬಳಸಿರಿ. ನಗೆ ಬೆಳಗಿಸಿರಿ.**

ನೀವು ಹಲ್ಲುಗಳನ್ನು ಬ್ರಷ್ ಮಾಡಲು ತೊಡಗಿದೊಡನೆಯೆ ಫ್ಲಾಶ್‌ನಲ್ಲಿರುವ ನೀಲಿ ಮುಖಶುದ್ಧಿ ಕಾರಕವು ನಿಮ್ಮ ಶ್ವಾಸ ಆಹ್ಲಾದಕರವಾಗುವಂತೆ ಮಾಡುತ್ತದೆ, ಮತ್ತು ನಿಮ್ಮ ಇಡೀ ಬಾಯಿಯನ್ನು ಸ್ವಚ್ಛವಾಗಿಡುತ್ತದೆ. ಬಾಯಿಯ ಸಂಪೂರ್ಣ ರಕ್ಷಣೆಗಾಗಿ ಫ್ಲಾಶ್‌ನಲ್ಲಿರುವ ಉತ್ತಮಿಕೆಯ ಬಗ್ಗೆ ವಿಯನ್ನಾದಲ್ಲಿ ಅದು ವರ್ಲ್ಡ್ ಸಿಲೆಕ್ಷನ್ ಅವಾರ್ಡನ್ನು ಗೆದ್ದಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಫ್ಲಾಶ್ ನೀಡುವ ರಕ್ಷಣೆಯ ಕಾರಣದಿಂದ ನಿಮ್ಮ ಆರೋಗ್ಯಪೂರ್ಣ ನಗು ದಿನದಿನವೂ ಬೆಳಗುತ್ತಿರುವುದು.

everest/82/FL/81-kn



# ಚಂದಮಾಮ

ಮೇ 1982



ಈ ಸಂಚಿಕೆಯಲ್ಲಿ


| | | |
|---|---|---|
| ಅಪಾರ್ಥ | ... | ೬ |
| ಮಕರದೇವತೆ | ... | ೧೧ |
| ನಿತ್ಯಾನಂದನ ಪಾಪ | ... | ೧೯ |
| ನಷ್ಟಪರಿಹಾರ | ... | ೨೫ |
| ಪಾಪ, ವಿದೂಷಕ! | ... | ೨೭ |
| ಮೂಢ ನಂಬುಗೆ | ... | ೨೮ |
| ಧರ್ಮಾಚರಣೆ | ... | ೩೧ |
| ಪೃಥ್ವೀರಾಜ ಮತ್ತು ಸಂಯುಕ್ತೆ-೩ | ... | ೩೫ |
| ಗಂಡನ ವಿಧೇಯತೆ | ... | ೩೯ |
| ಅಡ್ಡ ಪ್ರಶ್ನೆ | ... | ೪೩ |
| ಕಾಲಕೇತನ ಗರ್ವ | ... | ೪೪ |
| ಕೋಶಾಧಿಕಾರ | ... | ೪೯ |
| ವಿಘ್ನೇಶ್ವರ | ... | ೫೧ |
| ಗಂಧರ್ವೇಂದ್ರನ ಮಗಳು | ... | ೫೯ |





ಬಿಡಿ ಪ್ರತಿ ರೂ. ೧-೭೫

ವಾರ್ಷಿಕ ಚಂದಾ ರೂ. ೨೧.೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ಊರೊಳಗೆ ಯಾವ ಕಾರಣದಿಂದಲಾದರೂ ಒಬ್ಬರ ಮೇಲೆ ಹಗೆಯುಂಟಾದರೆ, ಪರಸ್ಪರರು ತಮ್ಮೊಳಗಿನ ಹಗೆಯ ಹೊಗೆಯನ್ನು ತಗ್ಗಿಸುವ ಯೋಚನೆಗೆ ಹೋಗಬೇಕೇ ಹೊರತು ಹೆಚ್ಚಿಸುವ ಸಾಧನೆಗಲ್ಲ. ಸಾಮಾಜಿಕ ಜೀವಿಗಳಾದವರು ಇದನ್ನು ಅರಿಯದೆ ತಮ್ಮೊಳಗಿನ ಹಗೆಗೆ ಒಣ ಹುಲ್ಲು ಹಾಕುತ್ತಾ ಹೋದರೆ ಅದರ ಧಗೆ ಇತರರಿಗೂ ತಟ್ಟುತ್ತದೆ. ಆದಕ್ಕೆ ಕಾರಣರಾದವರಿಗೂ ಹೆಚ್ಚಿನ ನಷ್ಟ. ಈ ಸಂಚಿಕೆಯಲ್ಲಿರುವ "ನಷ್ಟ ಪರಿಹಾರ" ಎಂಬ ಕಥೆ ಈ ಸತ್ಯವನ್ನು ಬೋಧಪಡಿಸುವಂತಹುದು.

## ಅಮರವಾಣಿ

**ಲಲಿತಾಂತಾನಿ ಗೀತಾನಿ ಕುವಾಕ್ಯಾಂತಂ ತು ಸೌಹೃದಮ್**
**ಪ್ರಣಾಮಾಂತಃ ನತಾಂ ಕ್ರೋಧಃ ಯಾಚನಾಂತಂ ಹಿ ಗೌರವಮ್**

ಸಂಗೀತದ ಘನತೆ ಕಿವಿಗೆ ಇಂಪಾಗಿರುವವರೆಗೆ, ಸ್ನೇಹವು ಕಟುನುಡಿಗಳು ಬಾರದವರೆಗೆ, ಉತ್ತಮರ ಕೋಪವು ಒಂದು ನಮಸ್ಕಾರದವರೆಗೆ, ಮನುಷ್ಯನ ಗೌರವವು ಯಾಚನೆಗೆ ಇಳಿಯದವರೆಗೆ.

---

ಸಂಪುಟ : ೬೮ ಮೇ '೮೨ ಸಂಚಿಕೆ : ೫

ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦





# ಅಪೂರ್ವ

ಅವಿವಾಹಿತನಾದ ರವಿ ಪಟ್ಟಣದಲ್ಲಿ ಉದ್ಯೋಗದಲ್ಲಿದ್ದನು. ಯುವಕನಾದ ಅವನಿಗೆ ಇನ್ನೂ ಮದುವೆಯಾಗಿದ್ದಿಲ್ಲ. ತಕ್ಕ ಹುಡುಗಿ ಸಿಕ್ಕಿದರೆ ಮದುವೆಯಾಗಲು ಸಿದ್ಧನಾಗಿರುವನೆಂದು ಅವನ ಸಹೋದ್ಯೋಗಿಯಾಗಿದ್ದ ಚಂದ್ರನಿಗೆ ತಿಳಿಯಿತು. ಚಂದ್ರನು ಹೇಮಾವತಿ ಎಂಬ ಹುಡುಗಿಯನ್ನು ಕುರಿತು ರವಿಯೊಂದಿಗೆ ಹೇಳಿದನು. ಹೇಮಾವತಿಗೆ ತಂದೆ ತಾಯಿಯರಿಲ್ಲ. ಒಬ್ಬ ಅಣ್ಣನು ಮಾತ್ರವೇ. ಓದಿಕೊಂಡ ಹುಡುಗಿಯಾದರೂ ಮನೆಗೆಲಸವೆಲ್ಲ ಚೆನ್ನಾಗಿ ಮಾಡುವವಳು.

ಹಾಗಾದರೆ ನೋಡೋಣವೆಂದು ಒಂದು ದಿನ ರವಿ ಚಂದ್ರನೊಂದಿಗೆ ಅವಳ ಮನೆಗೆ ಹೋದನು. ಆ ದಿನ ಹೇಮಾವತಿಯ ಅಣ್ಣ ನೆರೆಯ ಊರಿಗೆ ಹೋಗಿದ್ದನಂತೆ. ಅತ್ತಿಗೆಯೇ ಹೇಮಾವತಿಯನ್ನು ರವಿಯ ಮುಂದೆ ಕರೆದು ತಂದು ಕೂಡಿಸಿದಳು. ಮೊದಲು ಚಂದ್ರನೇ ಮಾತನಾಡಿದನು.

ಹೇಮಾವತಿ ಸುಂದರಿಯಾದ ಹುಡುಗಿ. ರವಿ ಅವಳನ್ನು ಕೆಲವು ಪ್ರಶ್ನೆ ಕೇಳಿ, ಅವಳು ಕೊಟ್ಟ ಉತ್ತರಕ್ಕೆ ತೃಪ್ತನಾದಂತೆ ಚಂದ್ರನನ್ನು ನೋಡಿದನು.

"ಏನು ಹೇಳುವೆ ರವೀ? ಹೇಮಾವತಿಯ ವಿಷಯದಲ್ಲಿ ಕೊರತೆಯೇನೂ ಹೇಳುವಂತಿಲ್ಲ ಹೌದಾ? ಆದರೆ ಧನ ಹಣ ನಗನಟ್ಟು ಎದುರು ನೋಡುವುದಾದರೆ ಇವರಿಂದಾಗದು" ಎಂದನು ಚಂದ್ರ ಮೆಲ್ದನಿಯಿಂದ.

"ಹಣದಿಂದ ಕೊಂಡುಕೊಳ್ಳಲಾಗದ್ದು ಎಷ್ಟೋ ಇದೆ. ಹಣ ಮಾತ್ರದಿಂದ ಸುಖಪಡುತ್ತೇವೆಂಬ ನಂಬಿಗೆ ನನಗೇನಿಲ್ಲ" ಎಂದನು ರವಿ.

"ಹಾಗಾದರೆ ಹೇಮಾವತಿ ನಿನಗೆ ಹಿಡಿಸಿದಳೆಂದಾಯಿತು. ಈಗ ಹೇಮಾವತಿಯ ತಂದೆ ವರದಾಚಾರ್ಯರು ಇರುತ್ತಿದ್ದರೆ ಎಷ್ಟು ಸಂತೋಷಪಡುತ್ತಿದ್ದರು! ಯಾವುದಕ್ಕೂ ಪಡೆದು ಬಂದಿರಬೇಕು" ಎಂದನು ಚಂದ್ರ.

ವರದಾಚಾರ್ಯ ಎಂಬ ಹೆಸರು ಕೇಳಿ ಪೆಟ್ಟು ಬಿದ್ದಂತಾದ ರವಿ, "ವರದಾಚಾರ್ಯರೋ? ಯಾವ ಊರಿನವರು?" ಎಂದು ಕೇಳಿದನು.

"ಅವರು ಸ್ವಂತ ಊರು ರಾಮಾಪುರದಲ್ಲೇ ದೊಡ್ಡ ವೈದ್ಯರಾಗಿದ್ದರಂತೆ. ಸುತ್ತಮುತ್ತ ಅವರಷ್ಟು ಹೆಸರುವಾಸಿಯಾದ ವೈದ್ಯರು ಇರಲಿಲ್ಲವಂತೆ"

ಎಂ. ಕೆ. ಈಶ್ವರರಾವ್

ಎಂದನು ಚಂದ್ರು. "ಗೊತ್ತಾಯಿತು ಬಿಡು, ಇನ್ನು ಆ ವೈದ್ಯನ ಸುದ್ದಿ ಹೇಳಬೇಡ" ಎಂದು ಕೋಪದಿಂದ ಎದ್ದು ನಿಂತ ರವಿ "ಅವನ ಹೆಸರು ಮೊದಲೇ ತಿಳಿದಿರುತ್ತಿದ್ದರೆ ನಾನು ಈ ಮನೆಯ ನೆರಳಿಗೆ ಸಹಾ ಬರುತ್ತಿದ್ದಿಲ್ಲ. ಆ ಪಾಪಾತ್ಮನ ಮಗಳನ್ನು ನೋಡಿದ್ದಕ್ಕೆ ಸಚೇಲ ಸ್ನಾನ ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು" ಎಂದು ಹೇಳಿ ಹೊರಟುಬಿಟ್ಟನು.

ಇದನ್ನು ನೋಡಿ ಚಂದ್ರನಿಗೆ ವಿಸ್ಮಯವೆನಿಸಿತು. ಹೇಮಾವತಿಯೂ ಅತ್ತಿಗೆಯೂ ಬೆಪ್ಪು ಬಡೆದವರಂತಾದರು. ಹೇಮಾವತಿಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಚಂದ್ರನಿಗೆ ಏನು ಹೇಳಬೇಕೆಂದು ಗೊತ್ತಾಗದೆ, ತಲೆ ತಗ್ಗಿಸಿಕೊಂಡು ರವಿಯ ಹಿಂದೆ ಸಾವಕಾಶವಾಗಿ ನಡೆಯುತ್ತ ಅವನ ಮನೆಗೆ ಹೋದನು. ಆಗಲೂ ರವಿಗೆ ಸಿಟ್ಟು ತಗ್ಗಿರಲಿಲ್ಲ.

"ಸಾಧುವಾಗಿ, ವೈದ್ಯರಾಗಿ, ತುಂಬಾ ದಯವುಳ್ಳವರೆಂದು ಹೆಸರು ಪಡೆದಿದ್ದ ವರದಾಚಾರ್ಯರನ್ನು ಪಾಪಾತ್ಮರೆಂದು ಹೇಳಿದೆಯಲ್ಲಯ್ಯಾ? ಹಾಗೆ ಏನಾಯಿತು? ಏನು ಮಾಡಿದರು?" ಎಂದು ಚಂದ್ರನು ರವಿಯನ್ನು ಕೇಳಿದನು.

"ಹೇಳುತ್ತೇನೆ ಕೇಳು, ಮತ್ತೆ ಎಂದೂ ನೀನು ಆ ನೀಚನ ಹೆಸರು ಎತ್ತಲಾರೆ" ಎಂದು ರವಿ ಹೀಗೆ ಹೇಳಿದನು:

ರವಿಗೆ ರಾಮನೆಂಬೊಬ್ಬ ಬಾಲ್ಯ ಮಿತ್ರನಿದ್ದ. ರವಿ ಪಟ್ಟಣದಲ್ಲಿ ಉದ್ಯೋಗಕ್ಕೆ ಸೇರುವ ದಿನದಲ್ಲೇ ಆ ರಾಮನಿಗೆ ಮದುವೆಯಾಗಿತ್ತು. ಆ ಕಾರಣದಿಂದ ರವಿಗೆ ರಾಮನ ಮದುವೆಗೆ ಹೋಗಲು ಸಾಧ್ಯವಾಗಲಿಲ್ಲ. ರಾಮನಿಗೆ ರಾಮಾಪುರದಲ್ಲಿಯೇ ಉದ್ಯೋಗವಾಗಿತ್ತು. ಆದುದರಿಂದ ಅವನು ಅಲ್ಲಿಯೇ ತಳವೂರಿದ್ದನು.

ರವಿ ಉದ್ಯೋಗದಲ್ಲಿ ಸೇರಿದ ಮೂರು ತಿಂಗಳ ಮೇಲೆ ಎರಡು ದಿನಗಳ ರಜೆ ಕೂಡಿಕೊಂಡು



ಬಂದಿತ್ತು. ಅಂತಲೇ ಅವನು ಸ್ನೇಹಿತ ರಾಮನನ್ನು ನೋಡಲು ರಾಮಾಪುರಕ್ಕೆ ಹೊರಟನು. ಅವನು ಆ ಊರಿಗೆ ಹೋಗಿ ತಲಪುವಾಗ ಕತ್ತಲಾಯಿತು. ಆದರೂ ರಾಮನಿರುವ ಮನೆ ಅವನಿಗೆ ಸುಲಭವಾಗಿಯೇ ಸಿಕ್ಕಿತು.

ರವಿ ಬಾಗಿಲು ತಟ್ಟಿದ ಕೂಡಲೇ ರಾಮನ ಹೆಂಡತಿ ಜಾನಕಿಯೇ ಬಾಗಿಲು ತೆರೆದಳು. ಆಗ ಅವಳು ಬಹಳ ದುಃಖದಲ್ಲಿರುವಂತೆ ಕಾಣುತ್ತಿತ್ತು.

"ನನ್ನ ಹೆಸರು ರವಿ. ರಾಮನ ಸ್ನೇಹಿತ. ನೋಡಲು ಬಂದಿದ್ದೇನೆ" ಎಂದನು ರವಿ...

ಆ ಮಾತು ಕೇಳಿ ಅವಳು ತುಂಬಿದ ಕಣ್ಣೀರನ್ನು ಸೆರಗಿನಿಂದೊತ್ತಿಕೊಂಡು "ಸಮಯಕ್ಕೆ ನಿಮ್ಮಂಥವರು ಬಂದದ್ದು ಒಳ್ಳೆಯದಾಯಿತು. ನಿಮ್ಮ ಸ್ನೇಹಿತರಿಗೆ ಆರೋಗ್ಯ ಏನೂ ಚೆನ್ನಾಗಿಲ್ಲ. ಬನ್ನಿ" ಎಂದಳು.

ರವಿ ಬೇಗ ಬೇಗನೆ ಒಳಗೆ ಹೋದನು. ರಾಮನು ಮಂಚದ ಮೇಲೆ ಬೋಧವಿಲ್ಲದೆ ಬಿದ್ದುಕೊಂಡಿದ್ದನು.



ತೂಕಡಿಸುತ್ತ ನಿದ್ರಿಸಿಬಿಟ್ಟಳು. ಅದುವರೆಗೆ ಸರಿಯಾದ ನಿದ್ರೆ ಮಾಡಿರಲಿಕ್ಕಿಲ್ಲ ಪಾಪ !

ಸುಮಾರು ಅರ್ಧರಾತ್ರಿಯಾಗುವ ಸಮಯಕ್ಕೆ ರಾಮನ ಸ್ಥಿತಿ ರವಿಗೆ ಗಾಬರಿ ಹುಟ್ಟಿಸುವಂತೆ ಕಂಡಿತು. ಕಣ್ಣು ಮೇಲೆ ಮಾಡಿಕೊಂಡು ಬಾಯಿಯಿಂದ ಏನೋ ವಟ ವಟಿಸತೊಡಗಿದನು.

ರವಿ ಗಾಬರಿ ಬಿದ್ದು ಜಾನಕಿಯನ್ನೆಬ್ಬಿಸಿ "ನಾನು ಹೋಗಿ ಆ ವರದಾಚಾರ್ಯರನ್ನು ಕರೆದುಕೊಂಡು ಬರುತ್ತೇನೆ. ನೀನು ರಾಮನ ಹತ್ತಿರ ಧೈರ್ಯದಿಂದ ಕುಳಿತುಕೋ" ಎಂದನು.

ಜಾನಕಿ ವರದಾಚಾರ್ಯರ ಮನೆಯ ಗುರುತನ್ನು ಹೇಳಿದಳು. ರವಿ ಬೇಗನೆ ಹೋಟು ಬೇವಿನ ಮರದ ಗುರುತು ಹಿಡಿದು ವರದಾಚಾರ್ಯರ ಮನೆಯನ್ನು ಕಂಡುಕೊಂಡು ಗಟ್ಟಿಯಾಗಿ ಬಾಗಿಲು ತಟ್ಟಿದನು. ಸ್ವಲ್ಪ ಹೊತ್ತಿಗೆ ಆ ಬಾಗಿಲು ತೆರೆಯುವುದಕ್ಕೆ ಬದಲಾಗಿ, ಆಚೆಯ ಬದಿಯಲ್ಲಿದ್ದ ಕಿಟಕಿ ಬಾಗಿಲು ತೆರೆದ ಸದ್ದು ಕೇಳಿ ಅತ್ತ ಹೋದನು.

"ಯಾರದು ?" ಎಂಬ ಪ್ರಶ್ನೆ ಕೇಳಿ, "ನೀವೇನಾ ವರದಾಚಾರ್ಯರು ? ನನ್ನ ಸ್ನೇಹಿತ ರಾಮನ ಪರಿಸ್ಥಿತಿ..." ಎಂದು ರವಿ ಹೇಳುವಷ್ಟರಲ್ಲಿ "ವರದಾಚಾರ್ಯರು ನನ್ನ ಅಪ್ಪ. ಈ ಮಧ್ಯರಾತ್ರಿಯಲ್ಲಿ ಬಾಗಿಲು ಬಡಿಯುವುದೆಂದರೇನಿದು ?" ಎಂದು ಕಿಟಕಿಯೊಳಗಿದ್ದವನು ಕೋಪದಿಂದ ಕೇಳಿದನು.

"ರೋಗಿ ತುಂಬ ಅಪಾಯದ ಸ್ಥಿತಿಯಲ್ಲಿ ಇದ್ದಾನೆ ಅಂತ ನಿಮ್ಮ ಅಪ್ಪನ ಹತ್ತಿರ ಹೇಳಿರಯ್ಯಾ" ಎಂದನು ರವಿ. ಕಿಟಕಿಯೊಳಗಿದ್ದವನು ಕೋಣೆಯೊಳಗೆ ಮುಖತಿರುಗಿಸಿ, "ಯಾರೋ ರಾಮನೆಂಬವನಿಗೆ ಏನೋ ರೋಗ ಉಲ್ಬಣಿಸಿದೆಯಂತೆ. ಹೋಗಿ ನೋಡ್ತೀರಾ ಅಪ್ಪಾ ?" ಎಂದು ಕೂಗಿ ಕೇಳಿದನು.

"ರಾಮನೋ ಭೀಮನೋ ಯಾರಾರೋ ಇದ್ದಾರು. ಸುಮ್ಮನೆ ಗಡಿಬಿಡಿ ಮಾಡ್ತಾರೆ. ನಿದ್ದೆ

"ಮೂರು ದಿನಗಳಿಂದ ಮುಚ್ಚಿದ ಕಣ್ಣು ಬಿಡಿಸಲಿಲ್ಲ. ನನಗೆ ಬಹಳ ಭಯವಾಗಿದೆ" ಎಂದಳು ಗದ್ಗದ ಸ್ವರದಲ್ಲಿ ಜಾನಕಿ.

ರವಿ ರಾಮನ ಹಣೆಯನ್ನೂ, ಮೈ ಕೈಗಳನ್ನೂ ಮುಟ್ಟಿ ನೋಡಿ, "ಹೆದರಬೇಡಮ್ಮಾ, ವೈದ್ಯರು ನೋಡುತ್ತಿದ್ದಾರಷ್ಟೆ ? ಯಾರು ವೈದ್ಯರು ? ನಾನು ಹೋಗಿ ಕರೆದುಕೊಂಡು ಬರುತ್ತೇನೆ" ಎಂದನು.

"ಈ ಊರಲ್ಲಿ ವರದಾಚಾರ್ಯರೊಬ್ಬರೇ ವೈದ್ಯರು. ಎರಡು ಗಂಟೆಯ ಕೆಳಗೆ ಬಂದು ನೋಡಿ ಮದ್ದುಕೊಟ್ಟು ಪಕ್ಕದ ಊರಿಗೆ ಹೋಗಲಿಕ್ಕಿದೆ ಅಂತ ಹೇಳಿದ್ದಾರೆ. ಈಗ ಮನೆಗೆ ಬಂದಿದ್ದಾರೋ ಇಲ್ಲವೋ?" ಎಂದಳು ಜಾನಕಿ,

"ನೋಡೋಣ, ಹೆದರಬೇಡ" ಎಂದು ಅವಳಿಗೆ ಧೈರ್ಯ ಹೇಳಿ ರವಿ, ರಾಮನಿಗೆ ಉಪಚಾರ ಮಾಡುತ್ತಾ ಕುಳಿತನು. ರವಿ ಇದ್ದಾನೆಂಬ ಧೈರ್ಯದಲ್ಲಿ ಮೂಲೆಯಲ್ಲಿ ಕುಳಿತವಳು ಹಾಗೆಯೇ

ಹಾಳು. ಸ್ವಸ್ಥ ಮಲಕ್ಕೋ. ರೋಗಿ ಬದುಕಿದ್ದರೆ ಬೆಳಗ್ಗೆ ಹೋಗಿ ನೋಡ್ತೇನೆ" ಎಂದು ಒಳಗಿನ ಕೋಣೆಯಿಂದ ಉತ್ತರ ಹೇಳಿದ್ದೂ ರವಿಗೆ ಕೇಳಿತು. ಮರುಕ್ಷಣವೇ ಕಿಟಕಿಯು ಬಾಗಿಲು ರಪ್ಪನೆ ಮುಚ್ಚಿ ಕೊಂಡಿತು. ವೈದ್ಯನ ಪ್ರವರ್ತನೆ ರವಿಗೆ ಮಹಾ ಕೋಪವನ್ನುಂಟುಮಾಡಿತು. ಆದರೂ ಏನೂ ಮಾಡ ಲಾರದವನಾಗಿ, ಮನೆಗೆ ಹಿಂದಿರುಗಿ ನಡೆದ ಸಂಗತಿಯನ್ನು ಜಾನಕಿಯೊಂದಿಗೆ ಹೇಳಿ, "ಆ ವರದಾ ಚಾರ್ಯನನ್ನು ವೈದ್ಯನೆಂದು ಹೇಳುವುದೇ ಅವ ಮಾನ. ಕಲ್ಲೆದೆಯ ರಕ್ಕಸ. ರಾಮನನ್ನು ಈಗಲೇ ಪಟ್ಟಣಕ್ಕೆ ಸಾಗಿಸಿಕೊಂಡು ಹೋಗೋಣ. ಅಲ್ಲಿ ದೊಡ್ಡ ವೈದ್ಯರಿದ್ದಾರೆ. ಸಮೀಪದಲ್ಲಿ ಗಾಡಿ ಯಾವು ದಾದರೂ ಇದೆಯೇ ?" ಎಂದನು.

ಜಾನಕಿ ಬೇಗನೇ ಹೋಗಿ ಗುರುತಿನ ಗಾಡಿಯವ ನೊಬ್ಬನನ್ನು ಕರೆದುಕೊಂಡು ಬಂದಳು. ಇಬ್ಬರೂ ರಾಮನನ್ನು ಜಾಗರೂಕತೆಯಿಂದ ಎತ್ತಿ ತಂದು ಗಾಡಿಯಲ್ಲಿ ಮಲಗಿಸಿದರು. ಆದರೆ ನಡುದಾರಿ ಯಲ್ಲಿಯೇ ರಾಮನು ತೀರಿಹೋದನು.

ರವಿ ಈ ಕಥೆಯನ್ನು ಚಂದ್ರನಿಗೆ ಹೇಳಿದುದನ್ನು ಕೇಳಿದ ಮೇಲೆ "ಓಹೋ! ಹಾಗಾದರೆ ಹೇಮಾ ವತಿಯ ವಿಷಯದಲ್ಲಿ ನೀನು ಮಾಡಿದ್ದು ತಪ್ಪೆಂದು ಹೇಳಲಾರೆ" ಎಂದನು ಚಂದ್ರ.

ಮೂರನೇ ದಿನ ಸಾಯಂಕಾಲದಲ್ಲಿ ರವಿ ತನ್ನ ಬಿಡಾರದಲ್ಲೇ ಇದ್ದನು. ಯಾರೋ ಬಂದು ಬಾಗಿಲು ತಟ್ಟಲು ಬಾಗಿಲು ತೆರೆದು, ಅಲ್ಲಿ ನಿಂತಿದ್ದ ಹೇಮಾ ವತಿಯನ್ನು ನೋಡಿ ವಿಸ್ಮಯಗೊಂಡನು. "ನೀನಾ ? ಇಲ್ಲಿಗೇಕೆ ಬಂದೆ ?" ಎಂದು ಕೋಪದಿಂದ ಪ್ರಶ್ನೆ ಹೊರಟಿತು ರವಿಯ ಬಾಯಿಯಿಂದ.

"ಶಾಂತರಾಗಿರಿ. ಮದುವೇ ಮಾತಿಗಾಗಿ ಬಂದವಳೇ ಅಲ್ಲ" ಎಂದು ಹೇಮಾವತಿ ಒಳಗೆ ಹೋಗಿ ಕುಳಿತಳು.



ಇನ್ನೂ ತನ್ನನ್ನು ಕೋಪದಿಂದಲೇ ನೋಡು ತ್ತಿರುವ ರವಿಯನ್ನು ನೋಡಿ ಹೇಮಾವತಿ "ಚಂದ್ರಣ್ಣ ಎಲ್ಲಾ ಸಂಗತಿಯನ್ನು ನನ್ನೊಂದಿಗೆ ಹೇಳಿದರು. ಆ ದಿನ ಬೆಳಗಾಗುವುದಕ್ಕೆ ಮೊದಲೇ ನೀವು ನಿಮ್ಮ ಸ್ನೇಹಿತರನ್ನು ಸಾಗಿಸಿಕೊಂಡು ಪಟ್ಟಣಕ್ಕೆ ಹೋದುದ ರಿಂದ ಅಲ್ಲಿ ನಡೆದ ಘೋರ ಸಮಾಚಾರ ನಿಮಗೆ ಗೊತ್ತಿಲ್ಲ. ನನ್ನ ತಂದೆಯ ಮೇಲೆ ನೀವು ದೊಡ್ಡ ಅಪವಾದ ಹಾಕಿಬಿಟ್ಟಿರಿ. ಸತ್ಯವಾಗಿ ನಡೆದ ಸಂಗತಿ ಹೇಳಿ ನನ್ನ ತಂದೆಯ ಮೇಲೆ ನಿಮಗಿರುವ ಕೆಟ್ಟ ಅಭಿಪ್ರಾಯ ಹೋಗಲಾಡಿಸಲಿಕ್ಕೆ ಬಂದಿದ್ದೇನೆ" ಎಂದು ಮುಂದುವರಿಸಿ ನಡೆದುದೇನೆಂದು ಹೇಳಿದಳು.

ಆ ದಿನ ರಾತ್ರಿ ಹೇಮಾವತಿಯ ಅಣ್ಣ ಅವನ ಗೆಳೆಯನ ಮದುವೆಗೆಂದು ಹೋಗಿದ್ದ. ತಂದೆ ವೈದ್ಯ ವೃತ್ತಿಯಂತೆ ಒಬ್ಬ ರೋಗಿಯನ್ನು ನೋಡಲು ಪಕ್ಕದ ಊರಿಗೆ ಹೋಗಿದ್ದರು. ಹೇಮಾವತಿ ಅಡಿಗೆ ಮಾಡಿಟ್ಟು ತಂದೆಯ ದಾರಿ ಕಾಯುತ್ತಾ ಇದ್ದಳು.

ವರದಾಚಾರ್ಯರು ಬಾಡಿಗೆ ಗಾಡಿಯಲ್ಲಿ ಮನೆಗೆ ಹಿಂದಿರುಗಿ ಬರುವಾಗ ಅರ್ಧರಾತ್ರಿ ದಾಟಿತ್ತು. ಅವರು ಬಂದ ಕೂಡಲೇ, "ಹೇಮಾ, ಗಾಡಿಯವ ರಿಬ್ಬರೂ ಅಣ್ಣ ತಮ್ಮಂದಿರಂತೆ. ಬಹಳ ಹಸಿವಂತೆ ಅಡಿಗೆ ಮಾಡಿದ್ದನ್ನು ಅವರಿಗೆ ಬಡಿಸು. ನಾನು ಒಂದಿಷ್ಟು ಅವಲಕ್ಕಿ ಮಜ್ಜಿಗೆ ಬೆರೆಸಿ ತಿಂದು ಮಲಗು ತ್ತೇನೆ" ಎಂದರು.

ಹೇಮಾವತಿ ಮುಂದಿನ ಕೋಣೆಯಲ್ಲಿ ಎಲೆ ಹಾಕಿ ಗಾಡಿಯವರಿಬ್ಬರಿಗೂ ಬಡಿಸಿದಳು. ಅವರು ಊಟ ಮಾಡಿ ಕೈ ತೊಳೆದು ಬಂದ ಕೂಡಲೇ ಕತ್ತಿಯನ್ನು ತೋರಿಸಿ, ತಂದೆಯನ್ನೂ ಮಗಳನ್ನೂ ಮಂಚಕ್ಕೆ ಸೇರಿಸಿ ಕಟ್ಟಿದರು. ಅವರ ಬಾಯಿಯೊಳಗೆ ಬಟ್ಟೆಯ ಉಂಡೆಯನ್ನು ತುರುಕಿ, ಮನೆಯಲ್ಲಿದ್ದ ವಸ್ತುಗಳನ್ನೆಲ್ಲ ಗಂಟು ಕಟ್ಟಿಕೊಳ್ಳತೊಡಗಿದರು.

ಆಗಲೇ ವರದಾಚಾರ್ಯರ ಹೆಸರು ಹೇಳಿ ಕರೆ ಯುತ್ತ ಬಾಗಿಲು ತಟ್ಟುವ ಸಪ್ಪಳವಾಯಿತು. ಕಳ್ಳರು ಗಾಬರಿಯಾಗಿ ಸ್ವಲ್ಪ ಹೊತ್ತು ಗುಸುಗುಸು ಮಾತಾಡಿಕೊಂಡರು. ಅವರಲ್ಲೊಬ್ಬನು ಕಿಟಕಿ ಬಾಗಿಲು ತೆರೆದು ಬಂದವನು ವರದಾಚಾರ್ಯರ ಗುರುತಿಲ್ಲ ದವನೆಂದು ತಿಳಿದು, ಅವರ ಮಗನ ಹಾಗೆ ನಟಿಸಿ ಕರೆದವನು ಹಿಂದೆ ಹೋಗುವಂತೆ ಮಾಡಿದನು. ಕಿಟಕಿಯ ಮೂಲಕ ಕಿವಿಗೆ ಬಿದ್ದ ಮಾತುಗಳಿಂದ ರಾಮುನ ಕಠಿಣಾವಸ್ಥೆ ತಿಳಿದುಕೊಂಡ ವರದಾ ಚಾರ್ಯರು ಕಟ್ಟುಗಳನ್ನು ಸಡಿಲಿಸಿಕೊಂಡು ಏಳಲು ನೋಡಿದರು. ಆಗ ಕಳ್ಳರು ಕತ್ತಿಗಳಿಂದ ಅವರನ್ನು ತಿವಿದು, ಎಲ್ಲವನ್ನೂ ಗಂಟುಕಟ್ಟಿಕೊಂಡು ಓಡಿ ಹೋದರು. ಇದನ್ನು ನೋಡಿ ಹೇಮಾವತಿಗೆ ಬೋಧ ತಪ್ಪಿಹೋಗಿತ್ತು. ಆಮೇಲೆ ಎಚ್ಚರವಾದಾಗ ವರದಾಚಾರ್ಯರ ಅಂತ್ಯಕ್ರಿಯೆಯ ಸನ್ನಾಹಗಳು ನಡೆಯುತ್ತಿದ್ದುವು.

ಇದನ್ನೆಲ್ಲ ಕೇಳುತ್ತ ಆಶ್ಚರ್ಯಪಡುತ್ತಿದ್ದ ರವಿ ಯನ್ನು ನೋಡಿ ಹೇಮಾವತಿ, "ನಿಮ್ಮ ಸ್ನೇಹಿತರಿ ಗಾಗಿ ಪ್ರಾಣತ್ಯಾಗ ಮಾಡಿದ ನನ್ನ ತಂದೆ ನಿಮ್ಮ ದೃಷ್ಟಿಯಲ್ಲಿ ಮಹಾ ನೀಚರಾದರು! ಕಂಡದ್ದೂ ಕೇಳಿದ್ದೂ ನಿಜವಲ್ಲವೆಂದು ಈಗ ಗೊತ್ತಾಯಿತೇ? ಕಳ್ಳರೇನೋ ಮರುದಿನ ಸಿಕ್ಕಿಬಿದ್ದರು. ಈಗ ಅವರು ಸೆರೆಮನೆಯಲ್ಲಿದ್ದಾರೆ! ಅಪ್ಪ ಮಾತ್ರ ಇಲ್ಲ!" ಎನ್ನುವಾಗ ಅವಳ ಕಣ್ಣುಗಳು ತುಂಬಿದುವು.

ಈಗ ರವಿಯ ಕಣ್ಣುಗಳೂ ಒದ್ದೆಯಾದುವು. "ಕಂಡದ್ದೂ ಕೇಳಿದ್ದೂ ನಿಜವಲ್ಲ. ಆದರೆ ನಾನು ನಿನ್ನ ಕೊರಳಿಗೆ ಎಲ್ಲರೂ ನೋಡುವ ಹಾಗೆ ತಾಳಿ ಕಟ್ಟಿ ಆ ಮಾತನ್ನು ಸುಳ್ಳು ಮಾಡುವುದಂತೂ ನಿಜ" ಎಂದನು. ಅದನ್ನು ಕೇಳಿ ಹೇಮಾವತಿ ತೃಪ್ತಿಯಿಂದ ಮುಗುಳುನಕ್ಕಳು.






## ೬

[ಶಿವದತ್ತನ ಸಲಹೆಯಂತೆ ಸಮರಸೇನನು ತಾನೇ ನಾಯಕತ್ವವನ್ನು ಸ್ವೀಕರಿಸಲಿಕ್ಕೆ ಒಪ್ಪಿಕೊಂಡನು. ಸೈನ್ಯವನ್ನು ಒಂದು ಗೂಡಿಸಲು ನರವಾಹನನನ್ನು ಕಳುಹಿಸಿದನು. ಆವನು ಸೈನಿಕರಿಂದಲೂ ಪ್ರಜೆಗಳಿಂದಲೂ ಪೆಟ್ಟುತಿಂದು ಹಿಂದಿರುಗಿ ಬಂದನು. ಬೇರೆ ಉಪಾಯವಿಲ್ಲದೆ, ರಾಜಪ್ರಾಸಾದವನ್ನು ಕಾಪಾಡಲು ಮೃಗಶಾಲಾಧಿಪತಿಗೆ ಆಜ್ಞೆ ಮಾಡಿ ಕ್ರೂರಮೃಗಗಳನ್ನು ಬೋನುಗಳಿಂದ ಹೊರಗೆ ಬಿಡಬೇಕಾಯಿತು.]

ರೋಷಾವೇಶಗಳಿಂದ ಆರ್ಭಟಿಸುವ ಕ್ರೂರಮೃಗಗಳಿಂದಾಗಿ, ದಂಗೆಯೆದ್ದ ಪ್ರಜೆಗಳ ದಾಳಿಗೆ ತಾತ್ಕಾಲಿಕ ತಡೆಯುಂಟಾಗಿ, ಪರಿಸ್ಥಿತಿಯನ್ನು ಗ್ರಹಿಸಿ, ಸಮರಸೇನನು ಶಿವದತ್ತನೊಂದಿಗೆ ಹೇಳಿದ ಮಾತು ಕೇಳಿ ಮಂದರದೇವನಿಗೆ ಸಣ್ಣದೊಂದು ನಗುಬಂತು, ತಾನೂ ಶಿವದತ್ತನನ್ನು ಮೆಚ್ಚುವ ಹಾಗೆ.

"ಹೌದು ಮತ್ತೆ. ಪಟ್ಟಣ ಪ್ರಾಕಾರಗಳಿಗೆ ಆಚೆಗೆ ಕೂಡಿದ ಶತ್ರುಗಳಿಗೂ, ಪಟ್ಟಣದೊಳಗೆ ಕೆರಳಿ ಹೋದ ಪ್ರಜೆಗಳಿಗೂ ರಾಜನು ಸಿಂಹಾಸನದಿಂದಿಳಿಯುವುದೇ ಬೇಕಾದ್ದು. ಆಮೇಲೆ ರಾಜ್ಯಾಧಿಕಾರವನ್ನು ಯಾರು ವಶಪಡಿಸಿಕೊಂಡರೂ ಪ್ರಜೆಗಳ ಮಟ್ಟಿಗೆ ಸಿಗುವ ಫಲಿತವು ಒಂದೇ ತಾನೇ?" ಎಂದನು ಮಂದರದೇವ.

"ಅದು ನಿಜ" ಎಂದು ಶಿವದತ್ತನು ಒಪ್ಪಿಕೊಂಡನು. "ಎಷ್ಟಾದರೂ ಆ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಆಲೋಚಿಸಲಿಕ್ಕೆ ಅವಕಾಶ ಸಿಗಲಿಲ್ಲ. ಎಲ್ಲವೂ ಗಜಿಬಿಜಿಯಾದ ಅವಸರದ ವಿಷಯವಾಗಿತ್ತು. ಅದನ್ನು ಮನದಂದು ನಾನು ಹೀಗ ಹೇಳಿದೆ. 'ಸಮರಸೇನಾ, ಪ್ರಸ್ತುತದ ಪ್ರಶ್ನೆಗೆ ಅದೇ ಉತ್ತರವೆಂದು ಕಾಣುತ್ತದೆ. ನನ್ನ ಸ್ವಂತ ಅಭಿಪ್ರಾಯವೇ

ನಂದರೆ, ರಾಜ್ಯಾಧಿಕಾರವನ್ನು ಪರರ ಪಾಲಿಗೆ ಬಿಡುವುದಕ್ಕಿಂತಲೂ, ರಾಜನನ್ನು ಪದವಿಯಿಂದ ಕೆಳಗಿಳಿಸಿ, ಮೊದಲು ಈ ಪ್ರಜೆಗಳ ಸಹಾಯದಿಂದ ಹೊರಗಿನಿಂದ ಬಂದ ಶತ್ರುಗಳ ಮದವನ್ನು ಅಡಗಿಸಿಬಿಡಬೇಕು. ರಾಜನು ಪದವಿಯಿಂದ ಇಳಿದರಷ್ಟೇ ಪ್ರಜೆಗಳು ಸಮಾಧಾನಪಟ್ಟು ಒಂದಾಗಿ ನಮ್ಮ ಮಾತನ್ನು ಕೇಳುತ್ತಾರೆ. ಈಗ ಅವರ ಸಿಟ್ಟು ಅಷ್ಟೂ ರಾಜನ ಮೇಲೆಯೇ ಇರುವುದೆಂದು ಗೊತ್ತಾಗುತ್ತದಷ್ಟೆ? ಹೊರಗಿನ ಶತ್ರುಗಳು ಬರಲಿಕ್ಕೂ, ಇಲ್ಲಿ ರಾಜನು ಅಲಕ್ಷ್ಯವಾಗಿದ್ದುದಕ್ಕೂ ಸಂಬಂಧವಿಲ್ಲವೆನ್ನಲು ಸಾಧ್ಯವಿದೆಯೇ? ಇಲ್ಲವೇ ಇಲ್ಲ! ಸ್ವಯಂಕೃತಾಪರಾಧವೆಂದರೆ ಇದೇ ತಾನೆ?'

ನನ್ನ ಮಾತಿಗೆ ಸಮರಸೇನನು ತಲೆದೂಗುತ್ತ, 'ಮೂರು ಮಾತಿಗೂ ನಿಜ. ನನಗೆ ಕೂಡಾ ಅದೇ ಸರಿಯೆಂದು ತೋರುತ್ತದೆ. ನಮ್ಮ ರಾಜ ಚಿತ್ರಸೇನನು ವೃದ್ಧನಾಗಿದ್ದಾನೆ. ವಂಶೋದ್ಧಾರಕನೇ ಇಲ್ಲದವನು. ಆದ್ದರಿಂದ ನಾವು ಹೇಳುವ ಹಾಗೆ ಹೇಳಿದರೆ ರಾಜನು ಸಿಂಹಾಸನವನ್ನು ತ್ಯಜಿಸಲು ಒಪ್ಪುವನೆಂದೇ ನನಗೆ ತೋರುತ್ತದೆ. ಒಂದುಸಾರಿ ಪ್ರಜೆಗಳು ಸಮಾಧಾನಗೊಂಡಮೇಲೆ, ಅವರ ಒಗ್ಗಟ್ಟಿನ ಬಲದಿಂದ ಪಟ್ಟಣದಾಚೆಗೆ ಮುತ್ತಿಗೆ ಹಾಕಿರುವ ಶತ್ರುಗಳನ್ನು ಓಡಿಸುವುದು ದೊಡ್ಡ ಕಷ್ಟವೇನಲ್ಲ' ಎಂದನು.

ಹೀಗೆ ನಾವು ಮಾತಾಡಿಕೊಂಡಿರುವಾಗಲೇ ಚಿತ್ರಸೇನ ರಾಜನು ನಮ್ಮ ಬಳಿಗೇ ಬರುತ್ತಿದ್ದನು. ರಾಜನನ್ನು ನೋಡಿದಕೂಡಲೇ ಪ್ರಜೆಗಳು ಒಂದೇ ಬಾರಿಗೆ ದೊಡ್ಡದನಿಯಿಂದ, 'ರಾಜನು ನಾಶವಾಗಲಿ! ರಾಜಕೀಯ ನಾಶವಾಗಲಿ! ಇಂಥಾ ಬೊಂಬೇ ರಾಜನು ಇದ್ದರೇನು? ಸತ್ತರೇನು? ನಮ್ಮ ಮುಂದೆ ಯಾವ ಮುಖದಿಂದ ನಿಲ್ಲುವಿಯೋ?' ಎಂದು ಬೊಬ್ಬಿರಿದರು.

ಅದನ್ನು ಕೇಳುತ್ತಾ ಚಿತ್ರಸೇನನು ನಮ್ಮ ಹತ್ತಿರ ಬೇಗಬೇಗ ಬಂದು, 'ಸಮರಸೇನಾ! ಕೋಟೆಯ ಬುರುಜಿನ ಮೇಲೆ ನಿಂತು ನೋಡಿದರೆ ಪಟ್ಟಣದ ಹೊರಗೆ ಗುಡಾರಗಳನ್ನು ಹಾಕಿಕೊಂಡು ದಾಳಿ ಮಾಡಲು ಸರ್ವಸನ್ನದ್ಧರಾಗಿರುವ ನೂರಾರು ಶತ್ರು



ಗಳ ಗುಂಪು ಕಾಣುತ್ತದೆ. ಇನ್ನು ಪಟ್ಟಣದೊಳಗಿನ ಪ್ರಜೆಗಳ ಕ್ರೋಧೋದ್ರೇಕಗಳೂ ನನಗೆ ಅರ್ಥವಾಗುತ್ತದೆ. ಯಾವಾಗಲೂ ವಿನೋದ ಲೀಲೆಗಳಲ್ಲಿಯೇ ತೇಲಿಕೊಂಡಿರುವ ರಾಜನು, ಪ್ರಜೆಗಳ ಒಳಿತು ಕೆಡುಕುಗಳನ್ನು ಮರೆತೇ ಹೋದ ರಾಜನು ಎಷ್ಟು ಮಾತ್ರಕ್ಕೂ ಸಿಂಹಾಸನದಲ್ಲಿರಲು ಅರ್ಹನಲ್ಲ. ಈಗ ಅವರೇ ಗುರುಗಳಾಗಿ ನನಗೆ ಬುದ್ಧಿ ಕಲಿಸುತ್ತಿದ್ದಾರೆ. ನಾನು ಪ್ರಜೆಗಳು ಕೇಳುವಂತೆ ರಾಜ್ಯವನ್ನು ತ್ಯಾಗಮಾಡುವುದು ಮಾತ್ರವೇ ಅಲ್ಲ, ಅದಕ್ಕಿಂತ ದೊಡ್ಡ ತ್ಯಾಗವನ್ನೇ ಮಾಡಲು ನಿಶ್ಚಯಿಸಿದ್ದೇನೆ' ಎಂದನು ಮಂಟಪದ ಎತ್ತರಭಾಗದಲ್ಲಿ ನಿಂತು ಬಹು ದೂರದವರೆಗೆ ನೋಡುತ್ತಾ.

ಚಿತ್ರಸೇನ ಮಹಾರಾಜನು ಹೇಳಿದುದನ್ನು ಕೇಳಿ ನಾನೂ ಸಮರಸೇನನೂ ನಿರ್ವಿಣ್ಣರಾದೆವು. ನಮ್ಮ ಬಾಯಿಯಿಂದ ಯಾವ ಮಾತೂ ಹೊರಡಲಿಲ್ಲ. ಅವನ ಮಾತಿನ ಅರ್ಥವೇನೆಂದು ನಾವು ಪರಸ್ಪರ ನೋಡಿಕೊಳ್ಳುತ್ತಿರುವಾಗ, ಚಿತ್ರಸೇನನು ಪ್ರಜೆಗಳನ್ನು ಉದ್ದೇಶಿಸಿ ಕೈಗಳನ್ನು ಹಾರಿಸುತ್ತಾ, ಗಂಟಲು ಹರಿಯುವಂತೆ ಹೀಗೆಂದನು :

'ಓಹೋಯ್, ಕುಂಡಲಿನೀ ದ್ವೀಪವಾಸಿಗಳೇ! ನಿಮ್ಮ ಆಗ್ರಹವನ್ನೂ, ನ್ಯಾಯವಾದ ನಿಮ್ಮ ಕೋರಿಕೆಯನ್ನೂ ನಾನು ಅರ್ಥಮಾಡಿಕೊಂಡಿದ್ದೇನೆ. ನಾನು ಭೋಗವಿಲಾಸಗಳಲ್ಲಿ ಮಗ್ನನಾಗಿ, ನಿಮ್ಮ ಕಷ್ಟ ಕಾರ್ಪಣ್ಯಗಳನ್ನು ತಿಳಿದುಕೊಳ್ಳದೆ ಬಹಳ ಕಾಲವನ್ನು ವ್ಯರ್ಥವಾಗಿ ಕಳೆದುಬಿಟ್ಟೆನು. ಅಂತಹ ನನ್ನನ್ನು ಕಿರೀಟ ತ್ಯಾಗಮಾಡಬೇಕೆಂದು ನೀವು ಕೇಳುವುದು ಧರ್ಮಸಮ್ಮತವೇ ಹೌದು. ಅದಕ್ಕಿಂತಲೂ ದೊಡ್ಡದಾದ ತ್ಯಾಗವನ್ನೇ ನಾನು ಮಾಡಲಿದ್ದೇನೆ. ನೀವು ಮಾತ್ರ ನಿಮ್ಮ ನಾಯಕನಾದ ಸಮರಸೇನನ ಆಜ್ಞೆಯನ್ನು ಪರಿಪಾಲಿಸಿಕೊಂಡಿರಬೇಕು. ನಿಮ್ಮನ್ನು ಸರಿಯಾದ ರೀತಿಯಲ್ಲಿ ನಡೆಯಿಸಲು ಆತನೇ ತಕ್ಕ ಸಮರ್ಥನು. ಇನ್ನು ನಾನು ಇಲ್ಲವೇ ಇಲ್ಲ. ಪ್ರಜಾದ್ರೋಹಿಯಾದ ರಾಜನು ಹೋಗಬೇಕಾದಲ್ಲಿಗೇ ಹೋಗುತ್ತಾನೆ! ಇದೋ ಅಪ್ಪಣೆ!' ಎಂದನು.






ಆ ಮಾತನ್ನು ಕೇಳಿ ಪ್ರಜೆಗಳು ಸಮರಸೇನನಿಗೆ ಜಯಕಾರ ಮಾಡಲು ತೊಡಗಿದರು. ಆದೇ ಹೊತ್ತಿಗೆ ಯಾರೂ ಇದಿರು ನೋಡದಂತೆ ರಾಜಾ ಚಿತ್ರಸೇನನು ಮಂಟಪದ ಮೇಲಿನಿಂದ ಕೆಳಕ್ಕೆ ಹಾರಿಬಿಟ್ಟನು! ಕಣ್ಣು ಮುಚ್ಚಿಬಿಡಿಸುವುದರೊಳಗೆ ಅವನು ಹಾರಿಯಾಗಿತ್ತು. ನಾನೂ ಸಮರಸೇನನೂ ಬೆಚ್ಚಿ ಬಿದ್ದು ಕೆಳಗೆ ಬಾಗಿನೋಡಿದೆವು. ಚಿತ್ರಸೇನನು ಆಗಲೇ ಪ್ರಾಣಬಿಟ್ಟ ಹಾಗೆ ಬಿದ್ದಿದ್ದನು. ಕೆನ್ನೀರ ತಂಬಿಗೆ ಕೌಚಿ ಬಿದ್ದಂತಿತ್ತು ಅವನ ತಲೆ. ಅವನಲ್ಲಿ ಯಾವ ಕದಲಿಕೆಯೂ ಕಾಣಲಿಲ್ಲ.

ಅವನು ಬಿದ್ದ ಸ್ಥಳದಲ್ಲಿ ಬೋನಿನಿಂದ ಬಿಡಲ್ಪಟ್ಟ ಮೃಗಗಳು ಅಲೆದಾಡಿ ಕೊಂಡಿದ್ದುವು. ಫಕ್ಕನೆ ಅಷ್ಟೆತ್ತರದಿಂದ ತಮ್ಮ ನಡುವೆಹಾರಿದ ಪ್ರಾಣಿಯಾವುದೋ ಎಂದು ಗೊತ್ತಾಗದೆ ಹೆದರಿಹೋದ ಕ್ರೂರ ಮೃಗಗಳೆಲ್ಲ ವಿಕಾರ ಧ್ವನಿಗಳನ್ನೆಬ್ಬಿಸುತ್ತ ಚೆಲ್ಲಾಚೆದರಾಗಿ ಓಡಿದುವು. ರಾಜನು ಹಾರಿದುದನ್ನು ನೋಡಿದ ಪ್ರಜೆಗಳು ನಿಶ್ಚೇಷ್ಟರಂತಾಗಿದ್ದರು. ರಾಜನು ಪ್ರಾಣತ್ಯಾಗಮಾಡುವ ಸಾಹಸ ತೋರಿಸುವನೆಂದು ಯಾರೂ ಊಹಿಸಿರಲಿಲ್ಲ.

'ಆಗಿಹೋಯಿತು! ಎಲ್ಲವೂ ಮುಗಿದು ಹೋಯಿತು!' ಎನ್ನುತ್ತಾ ಸಮರಸೇನನು ಅಲ್ಲಿದ್ದ ಕಂಬಕ್ಕೆ ಒರಗಿ ಹಾಗೆಯೇ ಬಿದ್ದುಬಿಟ್ಟನು. ಅವನ ಕಣ್ಣಂಚಿನಲ್ಲಿ ನೀರು ಒಸರುತ್ತಿದ್ದಿತು. ಹೇಗಿದ್ದ ರಾಜನ ಗತಿ ಹೇಗಾಗಿ ಹೋಯಿತು!

ನಾನು ಜನರ ಗುಂಪಿನ ಕಡೆಗೆ ನೋಡಿದೆ. ಎಲ್ಲರೂ ನಿಶ್ಶಬ್ದರಾಗಿದ್ದರು. ರಾಜನ ಮರಣವು ಅವರಿಗೆಲ್ಲ ಗೊತ್ತಾಗಿತ್ತು. ಆ ಹಠಾನ್ಮರಣವು ಅವರನ್ನೆಲ್ಲ ಸ್ತಂಭೀಭೂತಗೊಳಿಸಿತ್ತು. ಸಮರಸೇನನು ಸ್ಥಾಣುವಿನಂತೆ ಬಿದ್ದಿದ್ದ. ನಾವೆಲ್ಲಾ ಕಿಂಕರ್ತವ್ಯತಾ ಮೂಢರಾಗಿ ಹೋದೆವು. ನರವಾಹನನಲ್ಲಿ ಕೂಡಾ ಯಾವ ಚಲನೆಯೂ ಕಾಣಲಿಲ್ಲ.

ಅಷ್ಟರಲ್ಲಿ ಅಲ್ಲಿಗೆ ಮೃಗಶಾಲಾಧಿಕಾರಿ ಓಡುತ್ತಾ ಬಂದು, 'ಅಯ್ಯಾ! ಮಹಾ ಸೇನಾನಿಗಳೇ! ಈಗ, ಈಗ...' ಎಂದು ಏನೋ ಹೇಳಲು ಹೋಗಿ ಬಾಯಿ ಬಿದ್ದವನಂತಾದನು. ಸಮರಸೇನನ ಸ್ಥಿತಿ ಅವನನ್ನು ಇನ್ನಷ್ಟು ಹೆದರಿಸಿದಂತಿದ್ದಿತು.

ನಾನು ಅವನಿಗೆ ಸಮಾಧಾನ ಸೂಚಿಸಿ ಹತ್ತಿರ ಕರೆದೆನು. 'ಇಗೋಪ್ಪಾ. ಸಮರಸೇನರು ಚೆನ್ನಾಗಿಯೇ ಇದ್ದಾರೆ. ಈಗ ನೀನು ಆದಷ್ಟು ಬೇಗ ನಿನ್ನ ಮೃಗಗಳನ್ನೆಲ್ಲಾ ಅವುಗಳ ಬೋನಿನೊಳಗೆ ಹೋಗುವಂತೆ ಮಾಡಿಬಿಡು. ಆ ಕೆಲಸ ಎಷ್ಟು ಬೇಗ ನಡೆದರೆ ಅಷ್ಟು ಒಳ್ಳೆಯದು. ಇನ್ನು ಸ್ವಲ್ಪ ಹೊತ್ತಿನೊಳಗೆ ಕೋಟೆಯದ್ವಾರವನ್ನು ತೆರೆಯಿಸಲಿದ್ದೇವೆ. ಅಷ್ಟರೊಳಗೆ ಮಹಾರಾಜರ ಭೌತಿಕಕಾಯವನ್ನು ಪ್ರಾಂಗಣದಿಂದ ತೊಲಗಿಸಿ, ಸುರಕ್ಷಿತವಾದ ಸ್ಥಳದಲ್ಲಿ ಭದ್ರಪಡಿಸ ಬೇಕಾಗಿದೆ' ಎಂದು ಅಜ್ಞಾಪಿಸಿದೆನು. ನಾನು ಹೇಳುವ ಮಾತುಗಳು ಸಮರಸೇನನ

ಕಿವಿಗಳಿಗೆ ಬೀಳುತ್ತಲೇ ಇದ್ದುವು. ಸ್ವಲ್ಪ ಆಚೆಗೆ ನಿಂತಿದ್ದ ನರವಾಹನನು ನನ್ನನ್ನು ಓರೆ ನೋಟದಿಂದ ನೋಡಿ, ಆಗಲೇ ಎಚ್ಚರಕ್ಕೆ ಬಂದವನಂತೆ ಮಂಟಪದ ಮೇಲು ಭಾಗಕ್ಕೆ ಹೋದನು.

ಸ್ವಲ್ಪ ಹೊತ್ತಿಗೆ ಕ್ರೂರಮೃಗಗಳೆಲ್ಲ ಆವವುಗಳ ಬೋನಿನೊಳಗೆ ಹೋಗಿಸಲ್ಪಟ್ಟುವು. ನಾನೂ ಸಮರ ಸೇನನೂ ಅಲ್ಲಿಂದ ಮೆಟ್ಟಲಿಳಿದು, ಚಿತ್ರಸೇನನ ಭೌತಿಕಕಾಯವನ್ನು ಅಲ್ಲಿಂದ ತೊಲಗಿಸಿ ಒಯ್ಯಲು ಹೇಳಿ, ಕೋಟೆಯ ದ್ವಾರದ ಕಡೆಗೆ ಹೊರಟೆವು. ಪ್ರಜೆಗಳನ್ನು ಸರಿಗೊಳಿಸುವುದೇ ಈಗಿನ ಪ್ರಥಮ ಕರ್ತವ್ಯವಾಗಿತ್ತು.

ನಾವು ದ್ವಾರದ ಹತ್ತಿರ ಹೋದಾಗ ಪ್ರಜೆಗಳಲ್ಲಿ ಕಲಕಲರವವೆದ್ದಿತು. ಇದ್ದಕ್ಕಿದ್ದ ಹಾಗೆ ಎಲ್ಲರೂ ಒಟ್ಟಿಗೆ 'ಸಮರಸೇನರಿಗೆ ಜೈ !' ಎಂದು ದಿಕ್ಕುಗಳು ಭೇದಿಸುವಂತೆ ಕೂಗಿದರು. ಅದನ್ನು ಕೇಳಿ ನಮಗೆ ಒಂದು ಬಗೆಯ ಸಮಾಧಾನವೆನಿಸಿತು.

ಕೋಟೆಯ ದ್ವಾರವನ್ನು ತೆರೆಯಿಸಲಾಯಿತು. ಸಮರಸೇನನು ಸ್ವಲ್ಪ ಮುಂದೆ ಹೋಗಿ, ಗಂಟಲು ಸರಿಪಡಿಸಿಕೊಂಡು, 'ಕುಂಡಲಿನೀ ದ್ವೀಪ ವಾಸಿಗಳೇ! ಶಾಂತರಾಗಿರಿ!' ಎಂದು ದೊಡ್ಡ ಕಂಠದಿಂದ ಹೇಳಿದನು. ಮರುಕ್ಷಣವೇ ಎಲ್ಲರೂ ನಿಶ್ಶಬ್ದರಾಗಿ ಕುತೂಹಲದಿಂದ ಕಿವಿನಿಗುರಿಸಿಕೊಂಡು ನಿಂತರು.

'ನಾನು ನಡೆದ ಸಮಾಚಾರವನ್ನು ಕುರಿತು ಈಗ ಏನೂ ಮಾತಾಡುವುದಿಲ್ಲ. ದೇಶವು ಈಗ ಅರಾಜಕವಾಗಿದೆ. ಇದಕ್ಕೆ ಯಾರು ಯಾರು ಎಲ್ಲಿಯವರೆಗೆ ಬಾಧ್ಯರೆಂಬುದನ್ನು ಈಗ ಹೇಳಿ ಪ್ರಯೋಜನವೇನಿಲ್ಲ. ಪ್ರಸ್ತುತ ವಿಷಯವೇನೆಂದರೆ ಈಗ ರಾಜನಿಲ್ಲದ್ದರಿಂದ ರಾಜಭಕ್ತಿಯೂ ಇಲ್ಲದಂತಾಯಿತು. ಇಂತಹ ಪರಿಸ್ಥಿತಿಯಲ್ಲಿ ನಿಮ್ಮೆಲ್ಲರ ದೇಶಭಕ್ತಿಯೂ ಐಕ್ಯತೆಯೂ ಅತ್ಯಗತ್ಯವಾಗಿ ಬೇಕಾಗಿರುತ್ತದೆ. ನೀವೆಲ್ಲರೂ ಒಗ್ಗಟ್ಟಿನಿಂದ ನನ್ನ ಆದೇಶವನ್ನು ಕೇಳುವಿರಿ ತಾನೇ ?'




'ಹೌದೌದು ! ಸಮರಸೇನ ಮಹಾರಾಜರಿಗೆ ಜಯವಾಗಲಿ ! ಕುಂಡಲಿನೀ ದ್ವೀಪವು ವರ್ಧಿಸಬೇಕು ! ಅಪ್ಪಣೆಯಾಗಲಿ !' ಎಂದು ಪ್ರಜೆಗಳೆಲ್ಲ ಏಕ ಕಂಠದಿಂದ ಕೂಗಿದರು.

'ಹೇಳುತ್ತೇನೆ ಕೇಳಿರಿ ! ಪಟ್ಟಣ ಪ್ರಾಕಾರಗಳಾಚೆಗೆ ಪ್ರಬಲ ಶತ್ರುಗಳು ಕೂಡಿ ನಗರದೊಳಗೆ ದಾಳಿ ಮಾಡಲು ಕಾದುಕೊಂಡಿದ್ದಾರೆ. ಮೊದಲು ನಗರ ರಕ್ಷಣೆ, ಆಮೇಲೆ ದೇಶರಕ್ಷಣೆ ! ಆದ್ದರಿಂದ ಆಯುಧ ಹಿಡಿಯಲು ಗೊತ್ತಿರುವ ಪ್ರತಿ ಪೌರರೂ ಮುಂದಕ್ಕೆ ಬರಬೇಕಾದ ಸಮಯವಿದು. ಹಾಗೆ ಮಾಡಿದರೆ ನಮಗೆ ಜಯನಿಶ್ಚಯ ! ನೀವೆಲ್ಲಾ ಸಿದ್ಧರಾಗಿರುವಿರಾ ?' ಎಂದನು ಸಮರಸೇನ.

'ಸಿದ್ಧರು, ಸಿದ್ಧರು !' ಎಂದು ಕಲಕಲರವ ಮಾಡುತ್ತ ಎಲ್ಲರೂ ಒಬ್ಬರನ್ನೊಬ್ಬರು ತಳ್ಳಿಕೊಂಡು ಮುಂದೆ ಮುಂದೆ ಬರ ತೊಡಗಿದರು. 'ನನಗೆ ಕತ್ತಿ ಕೊಡಿರಿ, ನನಗೆ ಗಂಡುಗೊಡಲಿ, ನನಗೆ ಚಪಗೊಡಲಿ,

ಬಾಣ ಬತ್ತಳಿಕೆ ನನಗೆ' ಇವೇ ಮುಂತಾದ ಬಗೆ ಬಗೆಯಾದ ಒಂದೇ ಶಬ್ದವೆದ್ದಿತು.

ಸಮರಸೇನನು ಹಿಂದಿರುಗಿ ನೋಡಿದನು. ಸಮೀಪದಲ್ಲಿ ನಿಂತುಕೊಂಡಿದ್ದ ನರವಾಹನನ ಮೇಲೆ ಅವನ ದೃಷ್ಟಿ ಹೋಯಿತು. 'ನರವಾಹನಾ, ಈಸಾರಿ ನಿನ್ನ ಕೆಲಸ ಸುಕರವಾಗುವ ಹಾಗಿದೆ. ಈಗ ಹೋಗಿ ನಮ್ಮ ಸೈನ್ಯವನ್ನೆಲ್ಲಾ ಸೇರಿಸಿಬಿಡು' ಎಂದು ಹೇಳಿ ಸಮರಸೇನನು ಹಿಂದಿರುಗಿದನು.

ಅಲ್ಲಿಂದ ನಾವಿಬ್ಬರೂ ಕೋಟೆಯ ಬುರುಜಿನ ಮೇಲೆ ಹೋದೆವು. ದೂರದಲ್ಲಿ ನಾಯಿ ಕೊಡೆಗಳ ಹಾಗೆ ಶತ್ರುಗಳ ಅಸಂಖ್ಯ ಗುಡಾರಗಳು ಕಾಣುತ್ತಿದ್ದುವು. ಇರುವೆಗಳ ಸಾಲಿನಂತಿರುವ ಆ ಸೈನಿಕರು ಗುಡಾರಗಳ ಮುಂದೆ ಅಭ್ಯಾಸ ನಡೆಸಿ ಕೊಂಡಿದ್ದರು.

'ಶಿವದತ್ತಾ, ಇವರನ್ನು ನೋಡುವಾಗ, ಯುದ್ಧ ತಂತ್ರ, ವ್ಯೂಹ ರಚನೆಗಳನ್ನು ತಿಳಿಯದವರಂತಿಲ್ಲ. ಅವರ ಕವಾಯತ್ತುಗಳನ್ನೂ, ಅಭ್ಯಾಸ ವೈಖರಿಯನ್ನೂ ನೋಡುವಾಗ ಚೆನ್ನಾಗಿ ನುರಿತ ಸೈನಿಕರಾಗಿಯೇ ಕಾಣುತ್ತಾರೆ. ನಾವು ಅದಕ್ಕೆ ತಕ್ಕ ರೀತಿಯಲ್ಲೇ ಸಿದ್ಧರಾಗಬೇಕಾಗಿದೆ.' ಎಂದನು ಸಮರಸೇನ.

ಸಮರಸೇನನು ದೂರದಿಂದ ನೋಡಿದ ಮಾತ್ರ ದಿಂದಲೇ ಶತ್ರುಗಳ ಬಲಾಬಲಗಳನ್ನು ತಿಳಿಯುವಷ್ಟು ಸಮರ್ಥನಾಗಿದ್ದನು. ಅಲ್ಲಿರುವವರನ್ನೆಲ್ಲ ನೋಡು ವಾಗ ಅವರು ಸೈನಿಕ ಶಿಕ್ಷಣವಿಲ್ಲದ ಮೊರಟು ಜನರಂತೆ ಕಾಣುತ್ತಿದ್ದಿಲ್ಲ.

ನಾನು ಕೋಟೆಯ ಗೋಡೆಯ ಬದಿಯಲ್ಲಿರುವ ಅಗಳತೆಯನ್ನು ಪರೀಕ್ಷಿಸಿ ನೋಡಿದೆ. ಅದರಲ್ಲಿ ಸಾಕಷ್ಟು ನೀರು ಇರುವಂತೆ ಕಾಣಲಿಲ್ಲ. ಕೂಡಲೇ ಒಬ್ಬ ಸೈನಿಕನನ್ನು ಕರೆದು, ಅಗಳತೆಯೊಳಗೆ ತುಂಬಾ ನೀರು ಬರುವಂತೆ ಮಾಡಲು ಹೇಳಿ ಕಳುಹಿಸಿದೆನು. ಆಗ ಸಮರಸೇನನು ನನ್ನ ಕಡೆಗೆ ತಿರುಗಿ, 'ಶಿವದತ್ತಾ,




ಈಗ ಸೇನಾ ನಾಯಕತ್ವವನ್ನು ನಾನು ವಹಿಸದೆ ಉಪಾಯವಿಲ್ಲ. ನಿನ್ನ ಅಭಿಪ್ರಾಯವೇನು?' ಎಂದು ಕೇಳಿದನು.

ನನಗೆ ಕೂಡಲೇ ಆ ಪ್ರಶ್ನೆಗೆ ಉತ್ತರ ಹೇಳಲು ಸಾಧ್ಯವಾಗಲಿಲ್ಲ. ಕೋಟೆಯ ರಕ್ಷಣೆಯ ಭಾರವನ್ನು ನಾನು ವಹಿಸುವುದೆಂದರೆ, ಹೊರಗಿನ ಶತ್ರುಗಳ ಮೇಲೆ ದಾಳಿ ತೆಗೆಯುವುದರಲ್ಲಿ ನಾನು ಭಾಗ ವಹಿಸಲು ಆಗುವುದಿಲ್ಲವೆಂದಾಯಿತು. ಆಗ ಉಪ ಸೇನಾಪತಿಯಾಗಿ ಸಮರಸೇನನ ಕೈಕೆಳಗೆ ನರವಾಹ ನನು ಹೋಗುವ ಅವಕಾಶ ಉಂಟಾಗುತ್ತದೆ. ಸಮರಸೇನನನ್ನು ಬಿಟ್ಟಿರಲು ನನಗೆ ಇಷ್ಟವಿಲ್ಲ. ಈ ಇಕ್ಕಟ್ಟಿನಿಂದ ಹೇಗೆ ಹೊರಬೀಳುವುದೆಂದು, ನಾನು ಆಲೋಚಿಸುತ್ತಿರಲು ನರವಾಹನನು ಅವಸರವಸರ ವಾಗಿ ಅಲ್ಲಿಗೆ ಬಂದೇ ಬಿಟ್ಟ.

'ಮಹಾ ಸೇನಾನಿಗಳೇ, ಎರಡು ಸಾವಿರ ಮಂದಿ ಸೈನಿಕರನ್ನು ಸಮೀಕರಿಸಿದ್ದೇನೆ. ಪ್ರಜೆಗಳಲ್ಲಿ

ದೃಢಕಾಯರಾದ ಸುಮಾರು ನಾಲ್ಕು ಸಾವಿರ ಜನರಿಗೆ ಆಯುಧಗಳನ್ನು ಕೊಡುವ ಏರ್ಪಾಡು ಮಾಡಿದ್ದೇನೆ. ಇನ್ನು ಮುಂದೆ ಮಾಡಬೇಕಾದುದೇನೆಂದು ಅಪ್ಪಣೆಯಾಗುವುದೊಂದೇ ತಡ.' ಎಂದನು.

ಅವನು ಹೇಳಿದ ಹಾಗೆ ಸೈನ್ಯವೆಲ್ಲಾ ಕೋಟೆಯ ದ್ವಾರದ ಮೂಲಕ ಹೊರಗೆ ಹೋದ ಕೂಡಲೇ ನನ್ನ ಇಪ್ಪತ್ತೈದು ಮಂದಿ ಅನುಚರರೊಂದಿಗೆ ನಾನು ರಕ್ಷಣೆಯ ಕಾರ್ಯಕ್ರಮಗಳಿಗೆ ಇಳಿಯಲೇ ಬೇಕಾಯಿತು. ಪ್ರಜೆಗಳು ಆಯುಧಗಳನ್ನು ಧರಿಸಿದ ರೀತಿಯನ್ನು ನೋಡಿದರೆ ಅವರಿಗೆ ಆಯುಧಗಳನ್ನು ಉಪಯೋಗಿಸುವ ಪದ್ಧತಿ ಗೊತ್ತಿರುವಂತೆ ಕಾಣಲಿಲ್ಲ.

ಅಂಥವರನ್ನು ಕೂಡಿಸಿ, ಒಂದು ಕ್ರಮ ಪ್ರಕಾರ ನಿಲ್ಲಿಸುವುದು ಕೂಡಾ ಬಹಳ ಕಷ್ಟಸಾಧ್ಯವಾಯಿತು. ಅದರ ಮೇಲೆ ಅವರವರೊಳಗೆ ' ನನಗೆ ಇದು ಬೇಡ, ಅದು ಬೇಕು ; ' ಎಂಬ ಒಳಜಗಳಗಳುಬೇರೆ.

ನಾನು ಪಟ್ಟಣದ ದ್ವಾರಗಳನ್ನು ಮುಚ್ಚಿಸಿ ಕೋಟೆಯ ಬುರುಜಿನ ಮೇಲೆ ಏರಿಕೊಂಡೆನು. ಸಮರಸೇನನ ಮುಖ್ಯ ಸೈನಿಕ ಭಾಗವು ಕೋಟೆಯಿಂದ ಹೊರಗೆ ಹೋದ ಕೂಡಲೇ ಶತ್ರುಗಳ ಶಿಬಿರದಲ್ಲಿ ಸ್ವಲ್ಪ ಸಂಚಲನ ಕಾಣಿಸಿತು. ಅವರು ಅವಸರವಸರ ವಾಗಿ ಆಯುಧಗಳನ್ನು ಧರಿಸಿಕೊಂಡು ಸಾಲುಸಾಲಾಗಿ ನಿಂತು ಯುದ್ಧ ಸನ್ನದ್ಧರಾಗ ತೊಡಗಿದರು. ಅಶ್ವಿಕರು ದೊಡ್ಡ ದೊಡ್ಡ ಈಟಿಗಳನ್ನು ಧರಿಸಿ ಕೊಂಡು, ಕಾಲ್ಬಲಕ್ಕೆ ಮುಂದಾಗಿ ಬಂದು ನಿಲ್ಲು ತಿದ್ದರು. ಕೆಲವರು ಸಣ್ಣ ಸಣ್ಣ ತುಕಡಿಗಳಾಗಿ ವಿಂಗಡ ಗೊಂಡು ಸಮರಸೇನನ ಸೈನಿಕಭಾಗಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಕೂಡಿ, ಮಿಂಚಿನ ದಾಳಿ ನಡೆಸಲು ತಯಾರಾಗುತ್ತಿದ್ದರು. ಸಮರಸೇನನನ್ನು ನೆನೆದು ನಾನು ತುಂಬಾ ಹೆದರಿದೆ.

ಎರಡು ಸೇನೆಗಳ ನಡುವೆ ಯುದ್ಧವು ನಡೆದು ವಿಜಯವು ಅತ್ತಲೋ ಇತ್ತಲೋ ಎಂಬುದು ಗೊತ್ತಾಗುವಂತಹ ಖಾಡಾ ಖಾಡೀ ಯುದ್ಧವಲ್ಲ ಅದು. ಫಲಿತವು ಬೇಗದಲ್ಲಿ ಗೊತ್ತಾಗುವ ಅವಕಾಶ ಈ ಸಂದರ್ಭದಲ್ಲಿ ಇಲ್ಲವೆಂದು ನನಗೆ ಕೂಡಲೇ ಗೊತ್ತಾಯಿತು. ಹತ್ತು ಹನ್ನೆರಡು ಮಂದಿ ಅಶ್ವ ಸೈನಿಕರು ಒಮ್ಮೆಗೇ ಸಮರಸೇನನ ಮೇಲೆ ಬಿದ್ದು, ಕೈಗೆ ಸಿಕ್ಕಿದ ಮಂದಿಯನ್ನು ಕೊಂದು. ಆ ಕೂಡಲೇ ದೂರ ಓಡಿ ಹೋಗುತ್ತಾರೆ, ಸಮರಸೇನನು ದೊಡ್ಡ ಇಕ್ಕಟ್ಟನ್ನೇ ಮೈ ಮೇಲೆ ಹಾಕಿಕೊಂಡಂತಾಯಿತು.

ಈ ಬಗೆಯ ಮಿಂಚಿನ ದಾಳಿಗಳನ್ನು ಸಮರಸೇನನು ಊಹಿಸಿರಲಿಕ್ಕಿಲ್ಲ. ಅಂತಲೇ ಈಗ ಊಹಿಸಿಕೊಂಡು, ತನ್ನ ಅಶ್ವಿಕರನ್ನು ಕೂಡಾ ಹತ್ತು ಹತ್ತು ಮಂದಿ ಯಂತೆ ಚಿಕ್ಕಚಿಕ್ಕ ಗುಂಪುಗಳಾಗಿ ವಿಂಗಡಿಸುವ ಕಾರ್ಯಕ್ಕೆ ತೊಡಗಿದನು. — (ಇನ್ನೂ ಇದೆ)





# ನಿತ್ಯಾನಂದನ ಪಾಪ

ಎಂತಹ ಜಟಿಲ ಪ್ರಶ್ನೆಗಾದರೂ ಎಲ್ಲರೂ ಒಪ್ಪುವಂತಹ ಪ್ರತ್ಯುತ್ತರವನ್ನು ಕೊಡುವಷ್ಟು ಸಮರ್ಥನಾದ ತ್ರಿವಿಕ್ರಮ ಮಹಾರಾಜನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಹೆಗಲ ಮೇಲೇರಿಸಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿರುವ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನೀನೇನೋ ಇತರರಿಗೆ ಒಳಿತಾಗುವಂತೆ ಮಾಡಿ ದೊಡ್ಡ ಪುಣ್ಯಾತ್ಮನೆಂಬ ಸತ್ಕೀರ್ತಿ ಪಡೆಯಲಿಕ್ಕಾಗಿ ಹೆಣಗುವೆಯೆಂದು ಕಾಣುತ್ತದೆ. ಆದರೆ ಎಂತಹ ಪುಣ್ಯಾತ್ಮನಿಗಾದರೂ, ದೈವೇಚ್ಛೆ ಬೇರೆಯೇ ಆಗಿದ್ದರೆ ಪಾಪ ತಟ್ಟುತ್ತದೆಂಬ ಸೂಕ್ಷ್ಮ ಸಂಗತಿ ಮರೆಯಬೇಡ. ಒಂದೊಂದು ಸಾರಿ ಪುಣ್ಯಕಾರ್ಯವೇ ಪಾಪಕಾರ್ಯವಾಗಿ ತಿರುಗುತ್ತದೆ. ಇದಕ್ಕೆ ಉದಾಹರಣೆಯಾಗಿ ನಿನಗೆ ನಿತ್ಯಾನಂದನೆಂಬೊಬ್ಬ ಪರೋಪಕಾರಿಯ ಸಮಾಚಾರವನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆಯುವೆಯಂತೆ" ಎಂದು ಕತೆ ಹೇಳಲು ಪ್ರಾರಂಭ ಮಾಡಿತು :

ಬೇತಾಳ ಕಥೆಗಳು



ಹೋಗುತ್ತಿದ್ದರು. ಹೀಗಾಗಿ ಅವನೊಬ್ಬ ದೊಡ್ಡ ಪುಣ್ಯಾತ್ಮನೆಂದು ಒಳ್ಳೆಯ ಹೆಸರು ಪಡೆದಿದ್ದನು.

ನಿತ್ಯಾನಂದನಿರುವ ಊರಿನ ನೆರೆಯಲ್ಲಿರುವ ಒಂದು ಊರಿನಲ್ಲಿ ಸುಬ್ಬಯ್ಯನೆಂಬವನು ತುಂಬಾ ರೊಕ್ಕವನ್ನಿಟ್ಟುಕೊಂಡು ಬಡ್ಡೀ ವ್ಯವಹಾರದಿಂದ ಇನ್ನಿಷ್ಟು ಹಣ ಸಂಪಾದಿಸಿಕೊಂಡಿದ್ದನು. ಅವನ ಕೈಯಿಂದ ಸಾಲ ತೆಗೆದುಕೊಂಡವರು ಸರ್ವನಾಶವಾಗಿ ಹೋಗುವರೆಂದು ಜನರು ಹೇಳಿಕೊಳ್ಳುತ್ತಿದ್ದರು. ಸಾಲ ಬಡ್ಡಿಗಳನ್ನು ಲೆಕ್ಕ ಹಾಕಿ ವಸೂಲು ಮಾಡುವುದರಲ್ಲಿ ಸುಬ್ಬಯ್ಯನು ಧರ್ಮಾ ಧರ್ಮಗಳನ್ನು ನೋಡುತ್ತಿದ್ದಿಲ್ಲ, ಕಷ್ಟದಲ್ಲಿರುವವರು ಯಾವಾಗಲೂ ಇರುವುದರಿಂದ, ಸುಬ್ಬಯ್ಯನ ಕೈಯಿಂದ ಸಾಲ ತೆಗೆದುಕೊಳ್ಳುವವರು ಇದ್ದೇ ಇರುತ್ತಿದ್ದರು. ಒಂದು ಕಡೆಯಲ್ಲಿ ಅವನ ವ್ಯವಹಾರ ಚೆನ್ನಾಗಿಯೇ ನಡೆದುಕೊಂಡಿತ್ತು.

ದಿನಗಳು ಯಾವಾಗಲೂ ಒಂದೇ ರೀತಿಯಾಗಿರುವುದಿಲ್ಲವಷ್ಟೆ? ಅಂತಲೇ ಕಾಲಕ್ರಮದಲ್ಲಿ ಸುಬ್ಬಯ್ಯನಿಗೆ ಕೆಟ್ಟ ದಿನಗಳು ಪ್ರಾರಂಭವಾದುವು. ಒಂದು ದಿನ ಅವನ ಮನೆಗೆ ಕಳ್ಳರು ಬಿದ್ದು ಸರ್ವಸ್ವವನ್ನೂ ದೋಚಿಕೊಂಡು ಹೋದರು. ಆ ಕಳ್ಳರು ಸುಮ್ಮನೆ ಹೋಗದೆ ಅವನ ಮನೆಗೆ ಬೆಂಕಿಯನ್ನೂ ಹಚ್ಚಿದರು. ಸುಬ್ಬಯ್ಯನ ಮೇಲೆ ಊರಿನವರಿಗೆ ಒಳ್ಳೆಯ ಅಭಿಪ್ರಾಯವಿಲ್ಲದುದರಿಂದ ಅವನ ಸಹಾಯಕ್ಕೆ ಯಾರೂ ಬರಲಿಲ್ಲ. ಹೀಗಾಗಿ ಅಷ್ಟು ದೊಡ್ಡ ಐಶ್ವರ್ಯವಂತನಾದ ಸುಬ್ಬಯ್ಯ ಒಂದೇ ದಿನದಲ್ಲಿ ಬಿಕಾರಿಯಾಗಿ ಹೋದನು. ಅದನ್ನು ನೋಡಿ ಅವನಿಂದ ಹಿಂಡಿಸಿಕೊಳ್ಳಲ್ಪಟ್ಟವರು ಸಂತೃಪ್ತಿ ಪಟ್ಟರೇ ಹೊರತು ಅನುತಾಪ ತೋರಿಸಲಿಲ್ಲ.

ಆಮೇಲೆ ಸುಬ್ಬಯ್ಯನಿಗೆ ಯಾರೂ ಆಶ್ರಯ ನೀಡಲು ಮುಂದೆ ಬರದೆ, ತಕ್ಕ ಶಾಸ್ತಿಯಾಯಿತೆಂದು

ನಿತ್ಯಾನಂದನು ಚಿಕ್ಕತನದಿಂದಲೇ ಪರೋಪಕಾರ ಪರಾಯಣನಾಗಿದ್ದನು. ಕಷ್ಟಗಳಲ್ಲಿರುವವರಿಗೆ ಅವನೊಬ್ಬ ಇಷ್ಟದೈವವಾದನು. ಅಂತಹವರನ್ನು ಹುಡುಕಿಕೊಂಡು ಹೋಗಿ ಸಹಾಯ ಮಾಡುವ ಗುಣ ನಿತ್ಯಾನಂದನದು. ಹಾಗೆ ಹತ್ತುಮಂದಿಗೆ ಸಹಾಯ ಮಾಡಬೇಕೆಂತಲೇ ವ್ಯಾಪಾರದ ವೃತ್ತಿ ಹಿಡಿದು ಹಣ ಸಂಪಾದನೆ ಮಾಡುತ್ತಿದ್ದನು. ತನ್ನ ದಾನ ಧರ್ಮಗಳಿಗೆ ಸಂಸಾರವೂ, ಕುಟುಂಬ ಭಾರವೂ ಅಡ್ಡಿಯಾಗುವುದೆಂದು ತಿಳಿದು ಅವನು ವಿವಾಹ ಮಾಡಿಕೊಳ್ಳಲೇ ಇಲ್ಲ. ದಾನ ಪಡೆಯಲು ಅರ್ಹರಾದವರನ್ನು ತಿಳಿದೇ ಸಹಾಯ ಮಾಡುತ್ತಿದ್ದನಲ್ಲದೆ ಕಂಡ ಕಂಡವರಿಗೆಲ್ಲಾ ದಾನ ಮಾಡಲಾರನು. ಹಾಗೆ ಮಾಡುತ್ತಿದ್ದರೆ ಮೋಸಗಾರರಿಗೇ ಅವನಿಂದ ಲಾಭವಾಗಿ ಅವನದಾನದ ಪುಣ್ಯ ನಶಿಸುತ್ತಿತ್ತು. ಒಳ್ಳೆಯ ಹೆಸರೂ ಬರುತ್ತಿದ್ದಿಲ್ಲ. ಆದುದರಿಂದ ಅವನ ಹತ್ತಿರ ಸಹಾಯ ಕೇಳಲು ಯೋಗ್ಯರೆನಿಸಿದವರಷ್ಟೇ

ತಮ್ಮೊಳಗೇ ನಿರ್ಲಕ್ಷ್ಯವಾಗಿದ್ದರು. ಈ ಬಗೆಯ ಪರಿಸ್ಥಿತಿಯಿಂದ ಸುಬ್ಬಯ್ಯನಿಗೆ ಬುದ್ಧಿ ಬಂದಿತು. ತನ್ನ ಹತ್ತಿರ ಸ್ವಲ್ಪ ಹಣ ಕೂಡಿದ ಮೇಲೆ ಏನಾದರೂ ವ್ಯಾಪಾರ ಪ್ರಾರಂಭಿಸ ಬೇಕೆಂದು ಅಂದುಕೊಂಡನು.

ಆದರೆ ಅವನ ದುರದೃಷ್ಟದಿಂದಾಗಿ, ಅವನ ಹತ್ತಿರ ಹಣವೇನೂ-ಉಳಿಯಲಾರದೆ ಹೋಯಿತು. ಕಾಲ ಪರಿಸ್ಥಿತಿ ಬದಲಾದುದರಿಂದ ಆಹಾರ ಧಾನ್ಯಗಳ ಬೆಲೆ ಹೆಚ್ಚಾಗುತ್ತಾ ಹೋಗಿ ಮನೆಯಲ್ಲಿ ಯಾರೋ ಒಬ್ಬರಿಗೆ ಕಾಯಿಲೆ ಬರುವುದರಿಂದ, ಇರುವುದಿಷ್ಟು ಪೂರ್ತಿ ಖರ್ಚಾಗಿ ಬಿಡುತ್ತಿತ್ತು.

ಯಾವುದೋ ದುಷ್ಟಗ್ರಹವು ತನ್ನನ್ನು ಹಿಡಿದು ಪೀಡಿಸುತ್ತಿರುವುದೆಂದು ತೋರಿ ಸಂಕಟ ಪಡುತ್ತಿದ್ದನು ಸುಬ್ಬಯ್ಯ. ಊರಿನೊಳಗೆ ಒಬ್ಬ ದೊಡ್ಡ ಸಾಧು ಬಂದಿರುವನೆಂದು ಕೇಳಿ, ಸುಬ್ಬಯ್ಯ ಅವನ ಬಳಿಗೆ ಹೋಗಿ ತನ್ನ ಕಷ್ಟಗಳನ್ನು ಕುರಿತು ವಿವರವಾಗಿ ಹೇಳಿ, ತಾನು ಮೊದಲು ಮಾಡಿದ ಸಂಪಾದನೆಯ ರೀತಿಯನ್ನೂ ಮುಚ್ಚಿಡದೆ ಹೇಳಿ, ಪರಿಹಾರ ತಿಳಿಸ ಬೇಕೆಂದು ಬೇಡಿಕೊಂಡನು.

"ನೀನು ಅನೇಕಸಾರಿ ಬಡಜನರ ಬಾಯಿಯ ಅನ್ನವನ್ನು ಕಿತ್ತುಕೊಂಡು ಉಂಡವನು. ಈ ಪಾಪ ಸಾಮಾನ್ಯವಾದುದಲ್ಲ. ಬರಿಯ ಪಶ್ಚಾತ್ತಾಪದಿಂದ ಹೋಗುವಂತಹುದಲ್ಲ. ನೀನು ಒಂದೇ ಸಮಯದಲ್ಲಿ ಸಾವಿರಮಂದಿ ಬಡವರಿಗೆ ಅನ್ನದಾನ ಮಾಡಬೇಕು. ಅಷ್ಟು ಮಾಡಿದರೆ ನಿನ್ನ ಪಾಪ ಪರಿಹಾರವಾಗಿ ಹೋಗುತ್ತದೆ. ಆಮೇಲೆ ಧರ್ಮ ತಪ್ಪದಂತೆ ಎಚ್ಚರಿಕೆಯಿಂದಿದ್ದರೆ ಸುಖವಾಗಿ ಬದುಕಬಹುದು" ಎಂದನು ಆ ಸಾಧು.

ಆ ದಿನದಿಂದ ಸುಬ್ಬಯ್ಯನು ಮತ್ತಿಷ್ಟು ಜಾಗರೂಕತೆಯಿಂದ ಹಣವನ್ನು ಉಳಿಸ ತೊಡಗಿದನು. ಆದರೂ ಏನೋ ಒಂದು ಇದಿರು ನೋಡದ ಖರ್ಚು ತಗಲಿ ಉಳಿಸಿದ ಹಣವು ಖರ್ಚಾಗಿ ಬಿಡುತ್ತಿದ್ದಿತು. ಇನ್ನು ತಾನು ಮಾಡಿದ ಪಾಪಗಳಿಗೆ ವಿಮುಕ್ತಿ ಇಲ್ಲವೆಂದು ನಿರಾಶೆಯಿಂದ





ಮುದುಡಿದನು. ಆಗ ನಿತ್ಯಾನಂದನನ್ನು ಕುರಿತು ಜನರು ಮಾತಾಡಿಕೊಳ್ಳುವುದು ಅವನಿಗೆ ತಿಳಿಯಿತು.

ಸುಬ್ಬಯ್ಯ ಕೂಡಲೇ ಹೆಂಡತಿ ಮಕ್ಕಳನ್ನು ಕರೆದುಕೊಂಡು ನಿತ್ಯಾನಂದನಿರುವ ಊರಿಗೆ ಹೊರಟನು. ಆ ಊರಿನ ಪೇಟೆಯಲ್ಲಿ ಅವನಿಗೆ ಒಬ್ಬ ಮನುಷ್ಯನು ಇದಿರಾದನು. ಸುಬ್ಬಯ್ಯ ಅವನನ್ನು ಮಾತಾಡಿಸಿ, ನಿತ್ಯಾನಂದನನ್ನು ಕುರಿತು ವಿಚಾರಿಸಿದನು. ತನಗೆ ಬಂದ ಕಷ್ಟವನ್ನು ಕುರಿತೂ ಅವನೊಂದಿಗೆ ಸ್ವಲ್ಪ ಹೇಳಿದನು.

ಅದನ್ನೆಲ್ಲ ಕೇಳಿ ಆ ಮನುಷ್ಯನು ತಲೆ ದೂಗುತ್ತ, "ನಿಮ್ಮಂಥವರಿಗೆ ನಿತ್ಯಾನಂದರು ತಪ್ಪದೆ ಸಹಾಯ ಮಾಡುತ್ತಾರೆ. ತತ್‌ಕ್ಷಣವೇ ನಿಮ್ಮ ಸಮಸ್ಯೆ ತೀರಿ ಹೋಗಲು ನಾನೊಂದು ಉಪಾಯ ಸೂಚಿಸುತ್ತೇನೆ. ನಿತ್ಯಾನಂದರು ಬಹು ದೊಡ್ಡ ಪುಣ್ಯಾತ್ಮರು. ಅದಕ್ಕೊಂದು ಉದಾಹರಣೆ ದಿನಾ ಇಲ್ಲಿ ಕಾಣುತ್ತದೆ. ಅವರು ಪ್ರತಿದಿನಾ ದೇವಾಲಯದೊಳಗೆ ಅಡಿಯಿಟ್ಟ ಕೂಡಲೆ, ಅಲ್ಲಿರುವ ದೀಪಗಳೆಲ್ಲ ತನ್ನಂತಾನೆ ಬೆಳಗುತ್ತವೆ. ಆದುದರಿಂದ ಅವರು ಸಾಮಾನ್ಯ ಮನುಷ್ಯರೇ ಅಲ್ಲ. ನೀವು ಆ ಮಹಾನುಭಾವರನ್ನು ಕರೆದು ಭೋಜನಮಾಡಿಸಿ ಉಪಚರಿಸಿದರೇ ಸಾಕು. ಅದು ಸಾವಿರಮಂದಿ ಬಡವರಿಗೆ ಅನ್ನದಾನ ಮಾಡಿದ ಫಲಿತವನ್ನು ಕೊಡುತ್ತದೆ." ಎಂದನು.

ಸುಬ್ಬಯ್ಯನು ಬಹಳ ಸಂತೋಷದಿಂದ ಊರೊಳಗೆ ಹೋಗಿ ನಿತ್ಯಾನಂದನನ್ನು ನೋಡಿ ತಾನು ಬಂದ ಕೆಲಸವನ್ನು ಹೇಳಿದನು. ಹಾಗು ತನ್ನ ಮನೆಗೆ ಭೋಜನಕ್ಕೆ ಬರಬೇಕೆಂದೂ ಆಹ್ವಾನಿಸಿದನು.

"ಅಯ್ಯಾ, ನಿಮಗೆ ಸಹಾಯಮಾಡಲು ನನಗೇನೂ ಅಭ್ಯಂತರವಿಲ್ಲ. ನಿಮ್ಮ ಮಾತು ಬಹಳ ವಿಚಿತ್ರವಾಗಿದೆ. ಆದರೆ ನಾನು ಒಬ್ಬನೇ ಊಟ ಮಾಡಿಬಿಟ್ಟರೆ ಸಾವಿರಮಂದಿ ಉಂಡ ಹಾಗಾಗುವುದು ಹೇಗದು? ನಾನೊಬ್ಬ ಸಾಮಾನ್ಯ ಮನುಷ್ಯ. ಇಂತಹ ಮೂಢ ನಂಬುಗೆ ಇಟ್ಟು ಕೊಳ್ಳಬೇಡಿ." ಎಂದನು ನಿತ್ಯಾನಂದ.

"ನೀವು ಎಲ್ಲಾ ಮನುಷ್ಯರಂಥವರಲ್ಲ ಸ್ವಾಮಿ! ಮಹಾಭಾರತದಲ್ಲಿ ಕೃಷ್ಣನೊಬ್ಬನ ತೇಗಿನಿಂದ ಅಷ್ಟೂ ಮಂದಿ ಶಿಷ್ಯರೊಡಗೂಡಿದ ದೂರ್ವಾಸನ ಪರಿವಾರವೆಲ್ಲಾ ತೃಪ್ತರಾಗಲಿಲ್ಲವೆ? ನೀವು ಗುಡಿಯೊಳಗೆ ಹೊಕ್ಕಕೂಡಲೇ ದೀಪಗಳೆಲ್ಲ ತನ್ನಂತೆ ಬೆಳಗುವುದಿಲ್ಲವೇ? ಹಾಗೆಯೇ ಈ ಭೋಜನದಿಂದಲೂ ನಿದರ್ಶನ ಕಂಡೇ ಕಾಣುತ್ತದೆ. ನನ್ನ ನಂಬುಗೆಯನ್ನು ಭಗ್ನಗೊಳಿಸಬೇಡಿ ಸ್ವಾಮಿ." ಎಂದನು ಸುಬ್ಬಯ್ಯ.

ನಿತ್ಯಾನಂದನು ಅವನ ಕೋರಿಕೆಗೆ ಒಪ್ಪಿದನು.

ಸುಬ್ಬಯ್ಯನ ಕುಟುಂಬವು ನಾಲ್ಕು ದಿನಗಳವರೆಗೆ ಕಷ್ಟಪಟ್ಟು ಸಂಪಾದಿಸಿದರು. ಅದರಿಂದ ಸುಬ್ಬಯ್ಯನು ನಿತ್ಯಾನಂದನಿಗೆ ಘನವಾದ ಔತಣದಿಂದ ಉಪಚರಿಸಿ ಭೋಜನವಿಟ್ಟನು. ನಿತ್ಯಾನಂದನು ಊಟಮಾಡಿ




ಮುಗಿದ ಮೇಲೆ ಒಂದು ವಿಚಿತ್ರ ಕಂಡಿತು. ನಿತ್ಯಾನಂದನು ಉಂಡ ಎಲೆಯನ್ನು ಎತ್ತಿದ ಕೂಡಲೇ ಅದರಡಿಯಲ್ಲಿ ಇನ್ನೊಂದು ಎಂಜಲೆಲೆ ಇದ್ದಿತು. ಅದನ್ನು ಎತ್ತಿದರೆ ಮತ್ತೊಂದು ! ಹೀಗೆ ಒಂದರ ಮೇಲೊಂದಾಗಿ ಲೆಕ್ಕಮಾಡಿದಾಗ ಒಟ್ಟು ಸಾವಿರ ಎಲೆಗಳು ಬಂದುವು.

ಈ ನಿದರ್ಶನವನ್ನು ನೋಡಿ ನಿತ್ಯಾನಂದನಿಗೆ ಕೂಡಾ ಆಶ್ಚರ್ಯವಾಯಿತು. ಅವನು ತೃಪ್ತನಾಗಿ ಅಲ್ಲಿಂದ ಹೊರಟು ಹೋದನು.

ಸುಬ್ಬಯ್ಯ ಕೂಡಾ ಅಂದಿಗೆ ತನ್ನ ಕಷ್ಟಗಳೆಲ್ಲ ತೀರಿದುವೆಂದು ಸಂತೋಷಪಟ್ಟನು. ಆದರೆ ಆ ದಿನ ಸಾಯಂಕಾಲ ಇನ್ನೊಂದು ವಿಚಿತ್ರವೂ ಆಯಿತು.

ನಿತ್ಯಾನಂದನು ಎಂದಿನಂತೆ ದೇವಾಲಯಕ್ಕೆ ಹೋದನು. ದಿನಾ ಬೆಳಗುವಂತೆ ಗುಡಿಯೊಳಗಿನ ದೀಪಗಳು ತನ್ನಂತಾನೇ ಆ ದಿನ ಬೆಳಗಲಿಲ್ಲ ! ಈ ಸಮಾಚಾರ ಊರೊಳಗೆಲ್ಲಾ ತಿಳಿದು ಎಲ್ಲರನ್ನೂ ಅಚ್ಚರಿಗೊಳಿಸಿತು. ನಿತ್ಯಾನಂದನು ಬಹಳ ಕಳವಳಕ್ಕೀಡಾದನು. ತನ್ನಿಂದ ಏನು ಅಪರಾಧ ನಡೆಯಿತೆಂದು ಅವನಿಗೆ ತಿಳಿಯಲಿಲ್ಲ.

ಆ ದಿನದಿಂದ, ನಿತ್ಯಾನಂದನ ಕಾರಣದಿಂದ ದೇವಾಲಯದೊಳಗೆ ದೀಪ ತನ್ನಂತೆ ಉರಿಯುವುದು ನಿಂತೇ ಹೋಯಿತು. ನಿತ್ಯಾನಂದನು ತನ್ನ ಪುಣ್ಯವನ್ನು ಕಳೆದುಕೊಂಡನೆಂದು ಎಲ್ಲರೂ ಅಂದುಕೊಂಡರು. ತಾನು ಸುಬ್ಬಯ್ಯನ ಆತಿಥ್ಯಸ್ವೀಕರಿಸಿದಂದಿನಿಂದಲೂ ಹೀಗಾಗುವುದನ್ನು ನೋಡಿ ನಿತ್ಯಾನಂದನು ಚಿಂತೆಗೆ ಬಿದ್ದನು. ಆದರೆ ಅದರಿಂದಾಗಿ ಸುಬ್ಬಯ್ಯನ ಮೇಲೆ ಅವನಿಗೇನೂ ಕೋಪಬರಲಿಲ್ಲ.

ಒಂದುದಿನ ನಿತ್ಯಾನಂದನು ಮನೆಯಲ್ಲಿ ದೇವರ ವಿಗ್ರಹದ ಮುಂದೆ ಕುಳಿತುಕೊಂಡು "ಸ್ವಾಮಿ ! ನನ್ನಿಂದ ಏನು ಅಪರಾಧ ನಡೆಯಿತು ? ಇಷ್ಟು ಕಾಲದವರೆಗೆ ನಾನು ಒಳ್ಳೆಯವರಿಗೂ, ಕೆಟ್ಟವರಿಗೂ ಭೇದಭಾವವಿಲ್ಲದೆ ಸಹಾಯಮಾಡಿಕೊಂಡೇ ಇದ್ದೆ. ಸುಬ್ಬಯ್ಯನ ವಿಷಯದಲ್ಲಿ ನಾನು ಮಾಡಿದ ಅಪರಾಧವೇನು ಸ್ವಾಮಿ ? ಅವನು ಸ್ವಲ್ಪಕಾಲ ಪಾಪದ ಜೀವನ ನಡೆಸಿ, ಪಶ್ಚಾತ್ತಾಪ ಪಟ್ಟವನು. ಅವನಿಗೆ ಸಹಾಯ ಮಾಡುವುದು ತಪ್ಪಾಗುತ್ತದೆಯೆ ?" ಎಂದು ಪ್ರಶ್ನಿಸಿದನು.

ದೇವರಿಂದ ಯಾವ ಉತ್ತರವೂ ಬರಲಿಲ್ಲ. ನಿತ್ಯಾನಂದನು ಹಟಬಿಡದೆ ವಿಗ್ರಹದ ಮುಂದೆಯೇ ಕುಳಿತು, "ನಾನು ಮಾಡಿದ ತಪ್ಪೇನೆಂದು ತಿಳಿಯುವವರೆಗೂ, ಅನ್ನಪಾನ ಸ್ವೀಕರಿಸಲಾರೆ !" ಎಂದು ನಿಶ್ಚಯಿಸಿಕೊಂಡನು.

ಈ ಸಮಾಚಾರ ಊರಿನ ಹಿರಿಯರಿಗೆ ತಿಳಿಯಿತು. ಅವರು ಸುಬ್ಬಯ್ಯನನ್ನು ಕರೆದು ಪ್ರಶ್ನಿಸಿದರು. ಸುಬ್ಬಯ್ಯನು ನಡೆದ ಸಮಾಚಾರವನ್ನೆಲ್ಲಾ ಹೇಳಿದುದನ್ನು ಕೇಳಿ, ಮರು ದಿನವೇ ಸಾವಿರ ಮಂದಿ ಬಡವರಿಗೆ ಅನ್ನದಾನ ಮಾಡಬೇಕೆಂದು ನಿಶ್ಚಯಿಸಿ

ಕೊಂಡರು. ಆಗ ಸುಬ್ಬಯ್ಯನು. ಅವರೊಂದಿಗೆ, "ಈಗ ನೀವು ಮಾಡಬೇಕೆಂದಿರುವ ಅನ್ನದಾನದ ಖರ್ಚು ನನ್ನದು. ಪ್ರಸ್ತುತ ನಾನು ಬಡವ. ಆದರೆ ಕಷ್ಟಪಟ್ಟು ಕ್ರಮವಾಗಿ ಅದರ ಹಣವನ್ನು ಕೊಟ್ಟು ತೀರಿಸುತ್ತೇನೆ. ದಯ ಮಾಡಿ ಇದಕ್ಕೆ ಒಪ್ಪಬೇಕು" ಎಂದು ಪ್ರಾರ್ಥಿಸಿಕೊಂಡನು.

ಹಿರಿಯರು ಅದಕ್ಕೆ ಒಪ್ಪಿದರು. ಸಾವಿರ ಮಂದಿ ಬಡವರಿಗೆ ಊರವರ ಸಹಕಾರದಿಂದ ಅನ್ನದಾನ ನಡೆಯಿತು.

ಅದು ನಡೆದ ದಿನ ಸಾಯಂಕಾಲ ನಿತ್ಯಾನಂದನು ದೇವಾಲಯದೊಳಗೆ ಹೋದ ಕೂಡಲೇ ಅಲ್ಲಿದ್ದ ಎಲ್ಲಾ ದೀಪಗಳು ತನ್ನಂತಾನೇ ಬೆಳಗಿದುವು! ಅನಂತರ ಸುಬ್ಬಯ್ಯನ ಪರಿಸ್ಥಿತಿಯೂ ಚೆನ್ನಾಯಿತು, ಅವನು ನ್ಯಾಯತಪ್ಪದಂತೆ ವ್ಯಾಪಾರ ನಡೆಸುತ್ತಾ ಸುಖವಾಗಿ ಬಾಳಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ. ಅಷ್ಟು ದೊಡ್ಡ ಪುಣ್ಯವೂ, ಮಹತ್ತೂ ಕೂಡಿದ ನಿತ್ಯಾನಂದನು ಸುಬ್ಬಯ್ಯನ ಮನೆಯಲ್ಲಿ ಒಂದು ಹೊತ್ತು ಊಟ ಮಾಡಿದ ಮಾತ್ರಕ್ಕೆ ಅವನ್ನೆಲ್ಲಾ ಕಳೆದುಕೊಳ್ಳುವಂತಾಗಲು ಕಾರಣವೇನು? ಸುಬ್ಬಯ್ಯ ಮಾಡಿದ ಪಾಪಗಳು ಅವನನ್ನು ಅಂಟಿಕೊಂಡುವೇನು? ಈ ಸಂಶಯಕ್ಕೆ ಕಾರಣ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಸಿಡಿದು ಚೂರುಚೂರಾಗಿ ಹೋಗುತ್ತದೆ" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಈ ಪ್ರಪಂಚದಲ್ಲಿ ಪುಣ್ಯಾತ್ಮರ ಪುಣ್ಯವು ಎಷ್ಟು ದೊಡ್ಡ ದೆಂಬುದನ್ನು ಜನರೆಲ್ಲ ತಿಳಿದುಕೊಳ್ಳಲು ದೇವರು ಕೆಲವು ಅದ್ಭುತ ಶಕ್ತಿಗಳನ್ನು ಅವರಿಗೆ ಕೊಡುತ್ತಾನೆ, ಆದರಿಂದ ಅವರನ್ನು ಆದರ್ಶವಾಗಿಟ್ಟುಕೊಂಡು. ಮತ್ತೆ ಕೆಲವರು ಪುಣ್ಯ ಕಾರ್ಯಗಳನ್ನು ಮಾಡುವ ಅವಕಾಶವಿರುತ್ತದೆ. ನಿತ್ಯಾನಂದನು ಸುಬ್ಬಯ್ಯನ ಕೋರಿಕೆಯನ್ನು ಈಡೇರಿಸಿದುದರಲ್ಲಿ ತಪ್ಪೇನಿಲ್ಲ. ಆದರೆ ಸುಬ್ಬಯ್ಯ ತಾನು ಕಷ್ಟಪಟ್ಟು ಸಂಪಾದಿಸಿದ ಹಣದಿಂದಲೇ ಅನ್ನದಾನ ಮಾಡಬೇಕೆಂದಿದ್ದರೂ ಸುಲಭ ದಾರಿಯನ್ನು ನಂಬಿದ. ನಿತ್ಯಾನಂದನಿಂದಾಗಿ ಸಾವಿರ ಮಂದಿ ಬಡವರಿಗೆ ಒಂದು ಹೊತ್ತು ಊಟ ಸಿಗುವ ಸಂದರ್ಭ ತಪ್ಪಿಹೋಯಿತು, ಆ ಪಾಪದ ಕಾರಣದಿಂದಲೇ ಅವನು ದೇವಾಲಯದೊಳಗೆ ಅಡಿ ಯಿಟ್ಟ ಕೂಡಲೇ ಬೆಳಗುವ ದೀಪಗಳು ಬೆಳಗದೆ ಹೋದುವು. ಆದರಿಂದ ಸುಬ್ಬಯ್ಯನಿಗೆ ತಾನು ಮಾಡಿದ ತಪ್ಪು ಏನೆಂಬುದು ಅರ್ಥವಾಯಿತು."

ಈ ರೀತಿಯಾಗಿ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದಕೊಂಬೆಯಲ್ಲಿ ನೇತಾಡಿಕೊಂಡಿತು.





# ನಷ್ಟ ಪರಿಹಾರ

ತಿಮ್ಮನಪಾಳೆಯವೆಂಬ ಗ್ರಾಮವು ಮಾವಿನ ತೋಟಗಳು ಹೆಚ್ಚಾಗಿರುವ ಊರು. ಅಲ್ಲಿ ಸೂರಪ್ಪನ ತೋಟವು ಗ್ರಾಮದ ಪೂರ್ವ ದಿಕ್ಕಿನಲ್ಲಿಯೂ, ಸೋಮಪ್ಪನ ತೋಟವು ಪಶ್ಚಿಮ ದಿಕ್ಕಿನಲ್ಲಿಯೂ ಇದ್ದುವು. ಒಂದು ದಿನ ನಡೆದ ಏನೋ ಒಂದು ಸಣ್ಣ ತಕರಾರಿನಿಂದ ಸೂರಯ್ಯ ಸೋಮಪ್ಪರೊಳಗೆ ಶತ್ರು ಭಾವವು ನೆಲೆಯೂರಿಬಿಟ್ಟಿತ್ತು.

ಒಂದು ಬೇಸಗೆಯ ಕಾಲದಲ್ಲಿ ಮಾವಿನ ತೋಟಗಳು ಚೆನ್ನಾಗಿ ಫಲಿಸಿಕೊಂಡಿದ್ದುವು. ಅದನ್ನು ನೋಡುತ್ತಿದ್ದಂತೆ ಸೂರಪ್ಪನಿಗೆ ಒಂದು ದುರ್ಬುದ್ಧಿ ಬಂದು ಬಿಟ್ಟಿತು. ಈಸಾರಿ ಸೋಮಪ್ಪನಿಗೆ ಭಾರಿ ನಷ್ಟವಾಗುವಂತೆ ಮಾಡಬೇಕೆಂದುಕೊಂಡು ಅವನು ಪಟ್ಟಣಕ್ಕೆ ಹೋಗಿ ಒಂದು ಕೋತಿಯನ್ನು ಕೊಂಡುಕೊಂಡು ಬಂದು ರಾತ್ರಿಯಲ್ಲಿ ಸೋಮಪ್ಪನ ತೋಟದೊಳಗೆ ಬಿಟ್ಟನು. ಕೋತಿ ಮಾವಿನ ಕಾಯಿಗಳನ್ನು ಧ್ವಂಸಮಾಡಲು ತೊಡಗಿತು.

ಸೋಮಪ್ಪನು ಆ ಕೋತಿಯನ್ನು ಹಿಡಿಸಬೇಕೆಂದು, ಊರಿನೊಳಗಿದ್ದ ಒಬ್ಬ ಬೇಡನಿಗೆ, ಹತ್ತು ರೂಪಾಯಿಗಳ ಆಸೆ ತೋರಿಸಿದನು. ಅವನು ಬಲೆಬೀಸಿಯೂ, ಬೋನು ಇಟ್ಟೂ ಕೋತಿಯನ್ನು ಹಿಡಿಯಲಾಗದೆ, "ಬೇಕಾದರೆ ಬಾಣದಿಂದ ಹೊಡೆದು ಕೊಂದು ಬಿಡುತ್ತೇನೆ" ಎಂದನು.

"ಹಾಗೆ ಮಾತ್ರ ಮಾಡಬೇಡ. ಕೋತಿಯನ್ನು ಕೊಲ್ಲುವುದು ಮಹಾ ಪಾಪ! ಇದನ್ನು ಇಲ್ಲಿಗೆ ತಂದು ಬಿಟ್ಟವನು, ಸೂರಪ್ಪನೇ, ಸಂದೇಹವಿಲ್ಲ. ನನ್ನ ತೋಟ ಹೇಗೂ ನಾಶವಾಗಿ ಹೋಯಿತು. ಅವನ ತೋಟದ ಕತೆ ನೋಡುತ್ತೇನೆ." ಎಂದು ಕೋಪದಿಂದ ಗುಡುಗಿದನು ಸೋಮಪ್ಪ.

ಮರುದಿನ ಸೋಮಪ್ಪನು ಪಟ್ಟಣಕ್ಕೆ ಹೋಗಿ, ಹಣ ಕೊಟ್ಟು ಒಂದು ಕೋತಿಯನ್ನು ತೆಗೆದುಕೊಂಡು ಬಂದು, ಪೂರ್ವ ದಿಕ್ಕಿನಲ್ಲಿರುವ ಸೂರಪ್ಪನ ತೋಟದಲ್ಲಿ ಅದನ್ನು ಬಿಟ್ಟನು. ಆ ಕೋತಿ ಕೂಡಾ ಆ ತೋಟವನ್ನು ನಾಶಮಾಡಲು ತೊಡಗಿತು. ಸೂರಪ್ಪನು ಆ ಕೋತಿಯನ್ನು ಹಿಡಿಸುವ ಪ್ರಯತ್ನ ಮಾಡಿದನಾದರೂ ಅದೇನೂ ಪ್ರಯೋಜನವಾಗಲಿಲ್ಲ.

ಒಂದು ಕಡೆಯಲ್ಲಿ ತುಂಬಾ ಫಲಿಸಿದ ಮಾವಿನ ಕಾಯಿಗಳ ನಷ್ಟ, ಇನ್ನೊಂದು ಕಡೆ ಸೂರಪ್ಪನ ಮೇಲಿನ ಹಗೆ. ಇದಕ್ಕೇನು ಮಾಡುವುದೆಂದು

ವಿ. ಬಾಬುರಾವ್

ತಿಳಿಯದೆ ಅಪರಿಚಿತರಾದ ಬರುಹೋಗುವ ದಾರಿ ಹೋಕರ ಹತ್ತಿರ ಇಬ್ಬರೂ ಕೋತಿಯ ಪ್ರಭಾವ ವನ್ನು ಕುರಿತು ಜಂಬದ ಹಾಗೆ ಹೇಳಿಕೊಂಡು ನಗಲು ಪ್ರಾರಂಭಿಸಿದರು. ಈ ವಿಧವಾಗಿ ಸೂರಪ್ಪ ಸೋಮಪ್ಪರು ತಾವೇ ಕೋತಿಗಳನ್ನು ತಂದು ಅಲ್ಲಿ ಬಿಟ್ಟವರೆಂದು ಜನರಿಗೆ ತಿಳಿಯುವಂತೆ ಮಾಡಿದರು.

ಮುಂದೆ ನಾಲ್ಕು ವಾರಗಳ ಮೇಲೆ ಯಾರೂ ಊಹಿಸದಿದ್ದ ಹಾಗೆ ದೊಡ್ಡದೊಂದು ಉಪದ್ರವೇ ಬಂದು ಬಿದ್ದಿತು. ಸೋಮಪ್ಪ, ಸೂರಪ್ಪರ ತೋಟದ ಮಾವಿನ ಕಾಯಿಗಳನ್ನೆಲ್ಲ ನಾಶಮಾಡಿ ಮುಗಿಸಿದ ಮೇಲೆ, ಕೋತಿಗಳೆರಡೂ ಸ್ವಲ್ಪ ದೂರದಲ್ಲಿರುವ ಉಳಿದವರ ತೋಟಗಳ ಮೇಲೆ ಬಿದ್ದುವು. ಅವರು ಕೂಡಾ ಅವುಗಳನ್ನು ಹಿಡಿಯಲಾಗದೆ, ಪಟೇಲರ ಹತ್ತಿರ ಹೋಗಿ, ಫಿರ್ಯಾದಿ ಮಾಡಿದರು.

ಪಟೇಲರು ಅವರು ಹೇಳಿದ ಮಾತುಗಳನ್ನು ಕೇಳಿ ತಲೆಯೊಲಿದು, ಸೋಮಪ್ಪ, ಸೂರಪ್ಪರನ್ನು ತನ್ನ ಮುಂದೆ ಬರಮಾಡಿಸಿದರು.

ಪಟೇಲರು ಅವರಿಬ್ಬರೊಂದಿಗೆ ನಡೆದ ಸಂಗತಿ ಯನ್ನೆಲ್ಲಾ ಹೇಳಿ, "ನಿಮ್ಮಿಬ್ಬರ ತಕರಾರಿನಿಂದಾಗಿ ಊರಿನೊಳಗಿನ ಮಾವಿನ ತೋಟಗಳೆಲ್ಲಾ ಹಾಳಾ ದುವು. ಆದುದರಿಂದ ಊರೊಳಗಿನವರ ನಷ್ಟಕ್ಕೆ ನೀವಿಬ್ಬರೂ ಬಾಧ್ಯರು." ಎಂದರು.

ಸೂರಪ್ಪ, ಸೋಮಪ್ಪರು ತಾವು ಕೂಡಾ ಎಷ್ಟರ ಮಟ್ಟಿಗೆ ನಷ್ಟಪಟ್ಟಿದ್ದೇವೆಂಬುದನ್ನು ಹೇಳಿಕೊಂಡು ಆ ಕೋತಿಗಳನ್ನು ಹಿಡಿಯಲು ತಾವು ಮಾಡಿದ ಶ್ರಮವನ್ನೂ ಹೇಳಿಕೊಂಡರು.

ಪಟೇಲರು ಅದೆಲ್ಲಾ ಹೌದೆಂದು ತಲೆಯಾಡಿಸಿ, "ಬೇಕೆಂದೇ ಕಷ್ಟಪಟ್ಟು ಹೋಗಿ ಕೋತಿಗಳನ್ನು ಹಿಡಿದುಕೊಂಡು ಬಂದವರು ನೀವೇ. ಆದುದರಿಂದ ಅವುಗಳ ಕಾರಣದಿಂದಾಗಿ ನಷ್ಟ ಅನುಭವಿಸಿದ ತೋಟಗಾರರಿಗೆ ನೀವೇ ಪರಿಹಾರ ಧನ ಕೊಡಬೇಕು. ಅಲ್ಲದೆ ಆ ಕೋತಿಗಳನ್ನು ಹಿಡಿಯಲು ನೀವೇ ಪಟ್ಟಣಕ್ಕೆ ಹೋಗಿ, ಯಾರಿಂದ ಅದನ್ನು ತೆಗೆದು ಕೊಂಡಿರೋ ಅವರನ್ನೇ ಕರೆದುಕೊಂಡು ಬನ್ನಿ. ಅದಕ್ಕಾಗುವ ಹಣದ ಖರ್ಚು ಕೂಡಾ ನಿಮ್ಮದೇ. ಈ ಕೆಲಸವೆಲ್ಲಾ ಒಂದೆರಡು ದಿನಗಳಲ್ಲೇ ಮುಗಿಯ ಬೇಕು. ತಪ್ಪಿದರೆ ನಷ್ಟಪರಿಹಾರ ಎರಡು ಪಾಲು ಹೆಚ್ಚುತ್ತದೆ!" ಎಂದರು.

ಇಬ್ಬರೂ ಕೋತಿಯವನನ್ನು ಕರೆದು ತರಲು ಪಟ್ಟಣಕ್ಕೆ ಹೋಗುತ್ತ, "ಮೊದಲು ಕೋತಿ ತಂದವನು ನೀನೇ" ಎಂದು ಸೋಮಪ್ಪನು ಕೆಂಡ ಕಾರಿದನು. "ನನಗೆ ಬುದ್ಧಿ ಇಲ್ಲದಿದ್ದರೆ ನಿನಗಾದರೂ ಬುದ್ಧಿ ಬೇಡವೆ?" ಎಂದ ಸೂರಪ್ಪ. ಕಡೆಗೆ ತಾವಿಬ್ಬರೂ ಒಂದೇ ಎಂದುಕೊಂಡು ಸಮಾಧಾನಕ್ಕೆ ಬಂದರು.



# ಪಾಪ, ವಿದೂಷಕ!

ಒಬ್ಬ ರಾಜನ ಹತ್ತಿರ ಒಬ್ಬ ಮಂತ್ರಿ ಇದ್ದನು. ಅವನು ಯಾವ ಹೊಸ ಶಾಸನವನ್ನಾದರೂ ಅಮಲು ಪಡಿಸುವುದಕ್ಕೆ ಮೊದಲು ಅದನ್ನು ಆಸ್ಥಾನದ ವಿದೂಷಕನಿಗೆ ಕೊಟ್ಟು ಅವನಿಂದ ಓದಿಸಿಕೊಂಡ ಮೇಲೆಯೇ, ಆ ಶಾಸನದ ವಿಷಯವನ್ನು ಪ್ರಜೆಗಳಿಗೆ ತಿಳಿಯಪಡಿಸುವ ಕ್ರಮವಿಟ್ಟುಕೊಂಡಿದ್ದನು.

ಹೀಗೆಯೇ ಬಹಳ ಕಾಲ ನಡೆಯುತ್ತಿರಲು, ವಿದೂಷಕನಿಗೆ ತಾನು ಬಹಳ ಬುದ್ಧಿವಂತನೆಂಬ ಹೆಮ್ಮೆಯಿಂದ ಗರ್ವ ತಲೆಗೇರಿತು.

ಗರ್ವವನ್ನು ಹತ್ತಿಕ್ಕಿಕೊಳ್ಳಲಾರದೆ ಒಂದು ದಿನ ಮಂತ್ರಿಯೊಂದಿಗೆ, "ಮಹಾ ಮಂತ್ರಿಗಳೇ, ನೀವು ಯಾವ ಶಾಸನವನ್ನಾದರೂ ಅಮಲುಪಡಿಸುವುದಕ್ಕೆ ಮೊದಲು ಅದನ್ನು ನನ್ನಿಂದ ಓದಿಸಿ ಅರ್ಥ ವಿವರಣೆ ಹೇಳಿಸಿಕೊಳ್ಳುತ್ತಿದ್ದೀರಷ್ಟೆ? ಇದರಿಂದ ಬೇರೆಯಾರಿಗೂ ಇಲ್ಲದಂತಹ ಬುದ್ಧಿಯ ಪ್ರತಿಭೆ ನನಗಿರುವುದೆಂದು ನೀವು ಒಪ್ಪಿಕೊಂಡ ಹಾಗೇ ಆಯಿತಷ್ಟೆ? ಹಾಗಿರುವಾಗ ಆಸ್ಥಾನದಲ್ಲಿ ನನಗೆ ಹೆಚ್ಚಿನ ಗೌರವ ಪದವಿ ಕೊಡಬಾರದೇಕೆ?" ಎಂದನು.

ಮಂತ್ರಿ ಮುಗುಳು ನಕ್ಕು, "ಯಾವ ಶಾಸನವನ್ನಾದರೂ ಮೊದಲು ನಿನ್ನಿಂದ ಓದಿಸಿ ಅರ್ಥ ಹೇಳಿಸಿಕೊಳ್ಳುವುದು ನೀನು ದೊಡ್ಡ ಪ್ರತಿಭಾವಂತನೆಂಬುದಕ್ಕಲ್ಲ. ನಿನಗಂತೂ ಆ ಶಾಸನ ಅರ್ಥವಾಗಿಬಿಟ್ಟರೆ, ಇನ್ನು ರಾಜ್ಯದಲ್ಲಿ ಅರ್ಥ ಮಾಡಿಕೊಳ್ಳಲಾರದವರು ಯಾರೂ ಇರುವುದಿಲ್ಲವೆಂತಲೇ." ಎಂದನು.

ಮಂತ್ರಿ ತನ್ನನ್ನು ಎಷ್ಟೊಂದು ಮೂರ್ಖನ ಲೆಕ್ಕಕ್ಕೆ ತಳ್ಳಿದನೆಂದು ಅರ್ಥವಾಗಿ, ಪಾಪ, ವಿದೂಷಕನ ತಲೆಗೇರಿದ ಗರ್ವವು ಜರ್ರನೆ ಇಳಿದು ಹೋಯಿತು.





# ಮೂಢನಂಬುಗೆ

ಒಂದು ಊರಿನಲ್ಲಿ ಧನಂಜಯನೆಂಬವನಿಗೆ ರಾಗಿಣಿ ಎಂಬ ಒಬ್ಬಳೇ ಮಗಳಿದ್ದಳು. ಆದುದರಿಂದ ಅವಳು ತಂದೆ ತಾಯಿಗಳಿಗೆ ಪ್ರೀತಿಯ ಮಗಳಾಗಿ ತುಂಬ ಕೊಂಡಾಟದಲ್ಲಿ ಬೆಳೆದು ದೊಡ್ಡವಳಾದಳು. ತಮ್ಮ ಅಕ್ಕರೆಯ ಮಗಳು ತುಂಬಾ ಅದೃಷ್ಟವಂತೆ ಎಂದು ಅವರು ಮಾತು ಮಾತಿಗೂ ಹೇಳುತ್ತಿದ್ದರು. ಅವಳು ಏನು ಮಾಡಿದರೂ ಅವರಿಗೆ ಮುದ್ದು ಮುದ್ದಾಗಿ ಕಾಣುತ್ತಿತ್ತು. ತಲೆ ಬಾಚುವಾಗ, ತಿಲಕ ವಿಡುವಾಗ ಅವಳನ್ನು ನೋಡಿ, "ಮುದ್ದು ಮಗಳಮ್ಮ. ನಮ್ಮ ಪುಣ್ಯದಿಂದ ಹುಟ್ಟಿದ್ದೀ. ನೀನು ಅಡಿಯಿಡುವ ಮನೆಯಲ್ಲಿ ಶುಭಗಳೇ ನಡೆಯುತ್ತವೆ" ಎನ್ನುತ್ತಿದ್ದರು.

ಇಂತಹ ಮಾತುಗಳನ್ನು ಕೇಳಿ ಕೇಳಿ ಆ ಮಾತಿನಲ್ಲಿ ರಾಗಿಣಿಗೆ ಗಟ್ಟಿ ನಂಬುಗೆ ಉಂಟಾಯಿತು. ಅವಳು ಬೇರೆಯವರೊಡನೆ ಮಾತಾಡುವಾಗ, ತಾನು ಒಳ್ಳೆಯ ಅದೃಷ್ಟವಂತೆ ಎಂಬ ಹೆಮ್ಮೆಯನ್ನು ಪ್ರದರ್ಶಿಸುವಳು.

ಇಂತಹ ರಾಗಿಣಿಯನ್ನು ಮದುವೆ ಮಾಡಿಕೊಳ್ಳುವ ಭಾಗ್ಯವು ಸುಂದರೇಶನೆಂಬ ಯುವಕನಿಗೆ ದಕ್ಕಿತು. ಅವನು ಪಟ್ಟಣದಲ್ಲಿ ಸಂಬಳದ ಮೇಲೆ ಉದ್ಯೋಗ ಮಾಡುವವನಾಗಿದ್ದನು.

ರಾಗಿಣಿ ಗಂಡನ ಮನೆಗೆ ಹೋದ ಕೆಲವು ದಿನಗಳಲ್ಲಿ ಸುಂದರೇಶನಿಗೆ ಉದ್ಯೋಗದಲ್ಲಿ ಮೇಲಿನ ಅಂತಸ್ತೂ ಬಡತಿಯೂ ದೊರೆಯಿತು. ಈ ಸಂತೋಷ ಸಮಾಚಾರವನ್ನು ಅವನು ಹೆಂಡತಿಯೊಡನೆ ಹೇಳಿ, "ಇನ್ನೇನೂ ಹೆಚ್ಚಿನ ತೊಂದರೆಯಿಲ್ಲ. ಈಗ ಸಂಬಳ ಹೆಚ್ಚಾದುದರಿಂದ ನಾವು ಇನ್ನಿಷ್ಟು ಸೊಗಸಾಗಿ ಖರ್ಚು ನಿಭಾಯಿಸಬಹುದು" ಎಂದು ಬಹಳ ಉತ್ಸಾಹದಿಂದ ಹೇಳಿದನು.

ರಾಗಿಣಿ ಮುಗುಳು ನಗುತ್ತ "ಹೌದು ಹೌದು. ಒಳ್ಳೇದೇ ಆಯಿತು. ಆದರೆ ನಿಮ್ಮ ಅಂತಸ್ತು ಹೆಚ್ಚಾಗಲು ಮುಖ್ಯವಾದ ಕಾರಣ ನಾನು ಎಂಬ ಸಂಗತಿ ನಿಮಗೆ ಗೊತ್ತಾದ ಹಾಗಿಲ್ಲ. ಹೌದಾ?" ಎಂದಳು ನಗುತ್ತಾ.

ಸುಂದರೇಶನು ಆಶ್ಚರ್ಯಪಡುತ್ತ "ಕಾರ್ಯಾಲಯದಲ್ಲಿ ನನ್ನ ಅಂತಸ್ತು ಹೆಚ್ಚಲು ಮನೆಹಿಡಿದು ಕುಳಿತಿರುವ ನೀನು ಹೇಗೆ ಕಾರಣವಾಗುತ್ತೆ?" ಎಂದು ಕೇಳಿದನು.

"ನನ್ನ ಹುಟ್ಟೇ ಹಾಗಿದೆ. ಕೆಲವರು ಹುಟ್ಟಾ ನತದೃಷ್ಟರಾಗಿರುತ್ತಾರೆ. ಹಾಗೆಯೇ ಕೆಲವರು ಹುಟ್ಟುವಾಗಲೇ ಅದೃಷ್ಟವಂತರಾಗಿರುತ್ತಾರೆ. ನಾನು ಈ ಎರಡನೇ ಗುಂಪಿಗೆ ಸೇರಿದವಳು. ನಾನು ನಿಮ್ಮ ಮನೆಗೆ ಕಾಲಿಟ್ಟರೆ ಶುಭಗಳೇ ನಡೆಯುತ್ತವೆ. ಈಗ ಹಾಗೇ ಆಯಿತು ನೋಡಿದಿರಾ?" ಎಂದಳು ರಾಗಿಣಿ ಹೆಮ್ಮೆಯಿಂದ.

"ಸಾಕು ಬಿಡು, ನಿನ್ನ ಈ ಹುಚ್ಚುಮಾತನ್ನು ಕಟ್ಟಿಡು. ನೀನು ನಮ್ಮ ಮನೆಗೆ ಕಾಲಿಟ್ಟ ಕಾರಣ ದಿಂದ ನನ್ನ ಅಂತಸ್ತು ಮೇಲೇರಿದ್ದೇನಲ್ಲ. ನಾನು ಈವರೆಗೆ ಮಾಡುತ್ತಾ ಬಂದ ಉದ್ಯೋಗದಲ್ಲಿ ಶ್ರದ್ಧೆ ಯಿಟ್ಟು, ಹೊಣೆಯರಿತು ಎಚ್ಚರದಲ್ಲಿ ಮಾಡುತ್ತ ಬಂದುದರಿಂದ ಮೇಲಿನ ಅಧಿಕಾರಿಗಳ ದೃಷ್ಟಿಗೆ ಮುಖ್ಯಸ್ಥನಾಗಿ ಬಿದ್ದಿದ್ದೇನೆ. ಯೋಗ್ಯತೆ ನೋಡಿ ಮೇಲೇರಿಸಿದ್ದಾರೆ." ಎಂದನು ಸುಂದರೇಶ.

"ಹೌದು. ನಿಮ್ಮ ಆ ಶ್ರದ್ಧೇ, ಎಚ್ಚರಗಳನ್ನೆಲ್ಲಾ ಈವರೆಗೂ ಗುರುತಿಸದೇ ಇದ್ದವರು, ನಾನು ಈ ಮನೆಗೆ ಕಾಲಿಟ್ಟ ಕೂಡಲೇ ಗುರುತಿಸಿದರು ಹೌದಾ? ಇದರ ಅರ್ಥವೇನನ್ನುವಿರಿ?" ಎಂದು ಕೇಳಿದಳು ರಾಗಿಣಿ ಮುಗಳು ನಗುತ್ತಾ.

"ಅದರಲ್ಲೇನಿದೆ? ನನಗೆ ಮದುವೆಯಾದ ಮೇಲೆ ಬಡತಿ ಕೊಡುವುದೇ ಒಳ್ಳೆಯದೆಂದುಕೊಂಡು ಈಗ ಕೊಟ್ಟಿದ್ದಾರೆ." ಎಂದನು ಸುಂದರೇಶ. "ಒಳ್ಳೇ ತರ್ಕ ನಿಮ್ಮದು" ಎಂದಳು ರಾಗಿಣಿ ಬೇಸರದಿಂದ.

ಈ ಮಾತು ನಡೆದ ದಿನ ಮಧ್ಯ ರಾತ್ರಿಯ ಹೊತ್ತಿನಲ್ಲಿ ಸುಂದರೇಶನ ತಾಯಿ ಕೆಟ್ಟ ಸ್ವರದಿಂದ, "ಅಯ್ಯಯ್ಯೋ! ಸುಂದರೇಶಾ! ಮಂಚದ ಕೆಳಗಿದ್ದ ನನ್ನ ನಗಗಳೂ, ಸೀರೆಗಳೂ ಇದ್ದ ಪೆಟ್ಟಿಗೇನ ಕಳ್ಳ ಬಂದು ಎತ್ತಿಕೊಂಡು ಓಡಿದನಪ್ಪಾ! ನೋಡಪ್ಪಾ, ಗೋಡೇಲಿ ಎಷ್ಟು ದೊಡ್ಡ ಕನ್ನಾ ಕೊರೆದಿದ್ದಾನೇ!" ಎಂದು ರೋದಿಸ ತೊಡಗಿದಳು.

ಸುಂದರೇಶನೂ ರಾಗಿಣಿಯೂ ತಾಯಿ ಮಲಗಿ ದಲ್ಲಿ ಓಡಿದರು, ನಡೆದುದನ್ನು ನೋಡಿ, ಸಂದರೇಶನು ತಾಯಿಯನ್ನು ಸಮಾಧಾನಪಡಿಸುತ್ತ, "ಇನ್ನು



ಅತ್ತು ಏನು ಪ್ರಯೋಜನ ಅಮ್ಮಾ? ಸುಮ್ಮನಿರು! ನಡೆಯುವುದೇನೋ ನಡೆಯಿತು! ಹುಡುಕಿ ನೋಣ. ಅದೃಷ್ಟವಿದ್ದರೆ ಸಿಗುತ್ತೆ!" ಎಂದನು.

ಸುಂದರೇಶನ ತಾಯಿ ರಾಗಿಣಿಯನ್ನು ಚುರು ಚುರು ನೋಡುತ್ತಾ, "ಈ ಹುಡುಗೀ ಕಾಲುಗುಣ ಒಳ್ಳೇದಲ್ಲೋ! ಈವರೆಗೆ ನಮ್ಮ ಮನೆಗೆ ಕಳ್ಳ ಹೊಕ್ಕಿದ್ದುಂಟೇ? ಇವಳು ಮನೆಯೊಳಗೆ ಕಾಲಿಟ್ಟಗಳಿಗೆ ಅಂಥಾದ್ದು!" ಎಂದಳು.

"ಅಮ್ಮಾ! ಮಧ್ಯದಲ್ಲಿ ಇವಳನ್ನೇಕೆ ಎಳೆಯುತ್ತೀ? ಈ ಕಳ್ಳತನಕ್ಕೂ ಇವಳು ಮನೆಗೆ ಬಂದುದಕ್ಕೂ ಏನು ಸಂಬಂಧ? ನೀನು ಹತ್ತುಮಂದೀ ಎದುರಿನಲ್ಲಿ ಪೆಟ್ಟಿಗೆಯೊಳಗಿಡೋದನ್ನು ನೋಡಿಯೇ ಕಳ್ಳ ಬಂದಿದ್ದಾನೆ" ಎಂದನು ಸುಂದರೇಶ ಕೋಪದಿಂದ.

"ಅದೇನಲ್ಲವೋ ಅಪ್ಪಾ. ಒಬ್ಬೊಬ್ಬರು ಮನೆಗೆ ಕಾಲಿಟ್ಟ ವೇಳೆಯಲ್ಲಿ ದುರದೃಷ್ಟ ದೇವತೇ ಕುಣೀ ತಾಳಪ್ಪಾ ಆ ಮನೇಲೀ!" ಎಂದಳು ತಾಯಿ.

ಅತ್ತೆಯ ಬಾಯಿಯಿಂದ ಆ ಮಾತು ಹೊರಟ ಕೂಡಲೇ ರಾಗಿಣಿ ತಾಳಲಾಗದಷ್ಟು ದುಃಖದಿಂದ ಬೇಗ ಬೇಗನೆ ಹೋಗಿ ಹಿಂದಿನ ಬಾಗಿಲನ್ನು ತೆರೆದು ಬಾವಿಯಕಡೆಗೆ ಓಡಿದಳು.

ಹಿಂದೆಯೇ ಬಂದ ಸುಂದರೇಶನು ಅವಳನ್ನು ಹಿಡಿದು, "ನಿನಗೇನಾದರೂ ಹುಚ್ಚು ಹಿಡಿಯಿತೇನು? ಏಕೆ ಬಾವಿಯ ಬಳಿಗೆ ಓಡುತ್ತಿ?" ಎಂದನು.

"ನಿಮ್ಮ ಅಮ್ಮ ಹಾಗೆ ಹೇಳಿದ ಮೇಲೆ ಇನ್ನು ನಾನು ಬದುಕಿ ಏನು ಪ್ರಯೋಜನ? ಬಿಡಿರಿ ನನ್ನನ್ನು" ಎಂದಳು ರಾಗಿಣಿ.

"ಹೇಳ್ತೇನೆ ಬಾ" ಎಂದು ಸುಂದರೇಶನು ಹೆಂಡತಿಯನ್ನು ಮನೆಯೊಳಗೆ ಕರೆದುಕೊಂಡು ಬಂದು, "ಅಮ್ಮ ಹೇಳಿದ ಮಾತನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಡ. ನನ್ನ ಉದ್ಯೋಗದಲ್ಲಿ ಹೆಚ್ಚಿನ ಅಂತಸ್ತು ನಿನ್ನ ಬರುವಿಕೆಯಿಂದಲೇ ಉಂಟಾಯಿತೆಂದು ನೀನು ನಂಬಿರುವ ಹಾಗೆಯೇ, ಅಮ್ಮ ನಿನ್ನ ಬರುವಿಕೆಯಿಂದ ಮನೆಯಲ್ಲಿ ಕಳ್ಳತನಗಳಂತಹ ಕಷ್ಟಗಳು ಪ್ರಾರಂಭವಾದುವೆಂದು ನಂಬಿದ್ದಾಳೆ ಅಷ್ಟೇ. ಮೂಢನಂಬಿಕೆಯಲ್ಲಿ ನೀವಿಬ್ಬರೂ ಸರಿಸಮಾನರೇ. ನಿಜ ನೋಡಿದರೆ ಅದೆಲ್ಲಾ ಸುಳ್ಳು. ಕಾರಣವಿಲ್ಲದೆ ಕಾರ್ಯವಾಗುವುದಿಲ್ಲ" ಎಂದನು.

ಸ್ವಲ್ಪ ಹೊತ್ತಿನ ಮೇಲೆ ರಾಗಿಣಿಯ ಹೃದಯ ಹಗುರಾಯಿತು, "ಹೌದು. ನಿಮ್ಮ ಮಾತು ನಿಜವೆಂದು ಈಗ ನನಗೂ ಗೊತ್ತಾಗುತ್ತದೆ. ಅತ್ತೆಯ ಮಾತು ನನ್ನ ಕಣ್ಣು ತೆರೆಯಿಸಿತು. ಅಪ್ಪಾ ಅಮ್ಮಂದಿರು ಯಾವಾಗಲೂ ನನ್ನನ್ನು ಹೊಗಳುತ್ತ ಹೇಳುವ ಕೊಂಡಾಟದ ಮಾತಿನಿಂದ ನನಗೆ ಹಾಗೊಂದು ಗರ್ವ ತಲೆಗೇರಿತ್ತು. ಈಗ ಹೋಯಿತು." ಎಂದಳು ರಾಗಿಣಿ.





# ಧರ್ಮಾಚರಣೆ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪರಿಪಾಲನೆ ಮಾಡಿಕೊಂಡಿದ್ದ ಕಾಲದಲ್ಲಿ, ಬೋಧಿಸತ್ವನು ಇಂದ್ರಪ್ರಸ್ಥ ನಗರದಲ್ಲಿದ್ದ ಕುರುರಾಜ ವಂಶದಲ್ಲಿ ಧನಂಜಯನೆಂಬ ಹೆಸರಿನಿಂದ ಹುಟ್ಟಿ ಬೆಳೆದು ರಾಜನಾಗಿದ್ದನು. ಅವನ ಪರಿಪಾಲನೆ ಅತ್ಯುತ್ತಮವಾಗಿತ್ತು. ದೇಶದ ಯಾವ ಭಾಗದಲ್ಲಿಯೂ ಅತಿವೃಷ್ಟಿ ಅನಾವೃಷ್ಟಿಗಳಿರಲಿಲ್ಲ. ಆದುದರಿಂದ ಯಾವೊಂದು ತೊಂದರೆಗೂ ಸಿಕ್ಕದೆ ಪ್ರಜೆಗಳು ಸುಖ ಸಂತೋಷ ಗಳಿಂದಿದ್ದರು.

ಧರ್ಮವನ್ನು ಪಾಲಿಸುವುದರಲ್ಲಿಯೂ, ದಾನ ಧರ್ಮಗಳನ್ನು ಮಾಡುವುದರಲ್ಲಿಯೂ ಇಂದ್ರಪ್ರಸ್ಥದ ರಾಜನಾದ ಧನಂಜಯನಿಗೆ ಸರಿಸಾಟಿಯಾದವರು ಯಾರೂ ಇಲ್ಲವೆಂಬ ಉತ್ತಮ ಖ್ಯಾತಿ ಅವನಿಗಿತ್ತು. ಇಡಿಯ ಜಂಬೂ ದ್ವೀಪದಲ್ಲಿ ಕೂಡಾ ಅವನಂತಹ ರಾಜರಿಲ್ಲವೆನ್ನುತ್ತಿದ್ದರು.

ಆ ಕಾಲದಲ್ಲಿ ಕಳಿಂಗದೇಶವನ್ನು ಕಾಳಿಂಗನೆಂಬ ಹೆಸರಿನ ರಾಜನು, ದಂತಪುರವನ್ನು ರಾಜಧಾನಿಯಾಗಿಸಿಕೊಂಡು ಆಳುತ್ತಿದ್ದನು. ಒಂದು ವರ್ಷ ಆ ರಾಜ್ಯದಲ್ಲಿ ಮಳೆಯೇ ಬೀಳದೆ ಕೆಟ್ಟ ಬರಗಾಲ ಬಂದು ಬಿಟ್ಟಿತು. ಜನರು ತಿಂಡಿ ತೀರ್ಥಗಳಿಗೆ ದಾರಿ ಕಾಣದೆ ಅಲ್ಲಾಡಿ ಬೀಳುತ್ತಿದ್ದರು. ಅನೇಕ ಶಿಶುಗಳು ಹೆತ್ತ ತಾಯಿಯ ಮಡಿಲಲ್ಲೇ ಪ್ರಾಣ ಬಿಟ್ಟುವು. ಜನರೆಲ್ಲಾ ರೋದಿಸ ತೊಡಗಿದರು. ಎಲ್ಲಿ ನೋಡಿದರೂ ಬೀಭತ್ಸ ದೃಶ್ಯಗಳೇ ಕಾಣಿಸ ತೊಡಗಿದುವು.

ಈ ದುಸ್ಥಿತಿಯನ್ನು ನೋಡಿ ರಾಜನು ತನ್ನ ಮಂತ್ರಿಗಳೊಂದಿಗೆ ಮಂತ್ರಾಲೋಚನೆಗೆ ತೊಡಗಿದನು. "ಮುಖ್ಯವಾಗಿ ಈ ವರ್ಷ ನಮ್ಮ ದೇಶದಲ್ಲಿ ಇಷ್ಟೊಂದು ವಿಪರೀತವು ತಲೆಹಾಕಲು ಕಾರಣವೇನು ? ಈ ಪೀಡೆಯನ್ನು ತೊಲಗಿಸಿಕೊಳ್ಳಲು ನಾವು ಮಾಡಬೇಕಾದ ಕಾರ್ಯಗಳೇನು ? ಚೆನ್ನಾಗಿ ವಿಚಾರಿಸಿ ನೋಡಿ ಹೇಳ ಬೇಕು " ಎಂದು ರಾಜನು ಮಂತ್ರಿಗಳನ್ನು ಕೇಳಿದನು.

"ಮಹಾರಾಜಾ, ಧರ್ಮಕ್ಕೆ ಹಾನಿಯುಂಟಾದಾಗಲೆ ಹೀಗೆಲ್ಲಾ ನಡೆಯುತ್ತವೆ. ಇಂದ್ರಪ್ರಸ್ಥವನ್ನು ಆಳುವ ಧನಂಜಯನು ತನ್ನ ಧರ್ಮವನ್ನು ಅತ್ಯಂತ ಶ್ರದ್ಧೆಯಿಂದ ಪಾಲಿಸಿಕೊಂಡಿರುವುದರಿಂದಲೇ ಆ ದೇಶದಲ್ಲಿ ಋತು ಕಾಲ ಸ್ವಲ್ಪವೂ ತಪ್ಪದೆ ಮಳೆ ಬರುತ್ತದೆ. ಬರದ ಚಿಹ್ನೆಗಳೇನೆಂಬುದೇ ಆ ದೇಶದ



ವರಿಗೆ ಗೊತ್ತಿಲ್ಲ. ಇಷ್ಟು ಮಾತ್ರವೇ ನಾವು ಹೇಳಲು ಶಕ್ತರು " ಎಂದರು ಮಂತ್ರಿಗಳು.

"ಹಾಗಾದರೆ ಒಂದು ಮಾಡಿರಿ. ನೀವು ಕೂಡಲೇ ಇಂದ್ರಪ್ರಸ್ಥಕ್ಕೆ ಹೋಗಿರಿ. ಧನಂಜಯ ರಾಜನ ದರ್ಶನ ಮಾಡಿ, ಆತನು ಪಾಲಿಸುವಂತಹ ಧರ್ಮಗಳನ್ನು ಬಂಗಾರದ ರೇಕುಗಳ ಮೇಲೆ ಬರೆಯಿಸಿಕೊಂಡು ಬನ್ನಿ. ಅವುಗಳನ್ನು ನಾವುಕೂಡಾ ಅಮಲು ಪಡಿಸಿ, ನಮ್ಮ ದೇಶದ ಅರಿಷ್ಟಗಳನ್ನು ಹೋಗಲಾಡಿಸಿಕೊಳ್ಳೋಣ." ಎಂದನು ಕಾಳಿಂಗರಾಜ.

ಅದರಂತೆ ಕಳಿಂಗ ಮಂತ್ರಿಗಳು ಕೆಲವು ಬಂಗಾರದ ರೇಕುಗಳನ್ನು ತೆಗೆದುಕೊಂಡು ಇಂದ್ರಪ್ರಸ್ಥಕ್ಕೆ ಪ್ರಯಾಣ ಮಾಡಿ, ಧನಂಜಯನ ದರ್ಶನ ಮಾಡಿ, ಈ ವಿಧವಾಗಿ ಬಿನ್ನವಿಸಿಕೊಂಡರು :

"ಮಹಾರಾಜಾ, ನಾವು ಕಳಿಂಗದೇಶದಿಂದ ಬರುತ್ತಿದ್ದೇವೆ. ನಮ್ಮ ದೇಶದ ಪ್ರಜೆಗಳು ಭಯಂಕರವಾದ ಕ್ಷಾಮಬಾಧೆಯಿಂದ ಬಳಲುತ್ತಿದ್ದಾರೆ. ನೀವು ಧರ್ಮಸ್ವರೂಪಿಗಳಾಗಿದ್ದು, ಧರ್ಮ ಮಾರ್ಗ ತಪ್ಪದೆ ಪ್ರಜೆಗಳನ್ನು ಪರಿಪಾಲಿಸುವುದರಿಂದಲೇ ಬರಗಾಲದ ಈತಿಬಾಧೆಗಳೇನಿಲ್ಲದೆ ಸುಖವಾಗಿರುವಿರೆಂದು ತಿಳಿದುಕೊಂಡಿದ್ದೇವೆ. ಆ ಧರ್ಮ ಮಾರ್ಗಗಳು ಎಂಥವೆಂಬುದು ನಮಗೆ ತಿಳಿಯಲಿಲ್ಲ. ಅವುಗಳನ್ನು ನೀವು ಈ ಬಂಗಾರದ ರೇಕುಗಳ ಮೇಲೆ ಬರೆಯಿಸಿ ಕೊಡಬೇಕೆಂದು ಪ್ರಾರ್ಥನೆ. ಅವುಗಳನ್ನು ತೆಗೆದುಕೊಂಡು ನಾವು ಹಿಂದಿರುಗಿ ಹೋಗುತ್ತೇವೆ. ನಮ್ಮ ರಾಜರು ಆ ಮಾರ್ಗಗಳನ್ನು ಅನುಸರಿಸಿ ಪ್ರಜೆಗಳನ್ನು ಬರಗಾಲದ ಕಷ್ಟಗಳಿಂದ ಕಾಪಾಡಲು ಪ್ರಯತ್ನಿಸುತ್ತಾರೆ."

ಹೀಗೆ ಹೇಳಿ ಕಳಿಂಗ ಮಂತ್ರಿಗಳು ಕೆಲವು ಬಂಗಾರದ ರೇಕುಗಳನ್ನು ಧನಂಜಯನ ಮುಂದೆ ಇರಿಸಿದರು.

ಧನಂಜಯ ರಾಜನು ಅವರಿಗೆ ನಮಸ್ಕಾರ ಮಾಡುತ್ತ ಹೀಗೆಂದನು : "ಮಹಾಮಂತ್ರಿಗಳೇ ! ಕ್ಷಮಿಸಿರಿ. ನಾನು ಈ ಪತ್ರಗಳ ಮೇಲೆ ಧರ್ಮವನ್ನು ಲಿಖಿಸಲು ಅರ್ಹನಾದವನಲ್ಲ. ಏಕೆಂದರೆ ಒಂದುಸಾರಿ ನನ್ನಿಂದಲೇ ಒಂದು ಅಧರ್ಮವು ನಡೆದುಬಿಟ್ಟಿತ್ತು. ನಮ್ಮ ದೇಶದಲ್ಲಿ ಮೂರು ವರ್ಷಗಳಿಗೊಂದು ಸಾರಿ ಕಾರ್ತಿಕೋತ್ಸವ ನಡೆಯುತ್ತದೆ. ಆಗ ರಾಜನು ಒಂದು ಕೆರೆಯ ದಂಡೆಯಲ್ಲಿ ಯಜ್ಞ ಮಾಡಿ ನಾಲ್ಕು ದಿಕ್ಕುಗಳಿಗೆ ನಾಲ್ಕು ಬಾಣಗಳನ್ನು ಪ್ರಯೋಗಿಸಬೇಕು. ಒಂದು ಸಾರಿ ನಾನು ಪ್ರಯೋಗಿಸಿದ ಬಾಣಗಳಲ್ಲಿ ಮೂರು ಮಾತ್ರವೇ ಸಿಕ್ಕಿವೆ. ನಾಲ್ಕನೆಯದು ಕೆರೆಯೊಳಗೆ ಬಿದ್ದು ಹೋಯಿತು. ಅದು ಕೆರೆಯಲ್ಲಿ ಬೀಳುವಾಗ ಅದರ ಪೆಟ್ಟಿಗೆ ಮೀನುಗಳೂ ಕಪ್ಪೆ ಮರಿಗಳೂ ಸತ್ತುಹೋಗಿರಬೇಕು. ಆ ವಿಧವಾಗಿ ನಾನು ಧರ್ಮವನ್ನು ತಪ್ಪಿದವನಾದೆನು. ಆದರೆ ನಮ್ಮ ದೇಶದಲ್ಲಿ ಅರಿಷ್ಟಗಳೇನೂ ಇಲ್ಲವೆಂದು ನೀವು ಹೇಳುವುದಕ್ಕೆ ಕಾರಣ ಪರಿಪಾಲಕ ವರ್ಗದ ಬೇರೆ ಯಾರೋ ಆಗಿರಬೇಕು. ವಿಚಾರಿಸಿ ನೋಡಿರಿ."

ರಾಜನ ಮಾತುಗಳನ್ನು ಕೇಳಿ ಮಂತ್ರಿಗಳಿಗೆ

ಆಶ್ಚರ್ಯವಾಯಿತು. ಅವರು ರಾಜ ಮಾತೆಯಾದ ಮಾಯಾದೇವಿಯ ಬಳಿಗೆ ಹೋಗಿ, ಆಕೆಯೊಂದಿಗೆ ತಮ್ಮ ಸಮಾಚಾರವನ್ನು ಹೇಳಿ, "ತಾವಾದರೂ ನಮಗೆ ಧರ್ಮಗಳನ್ನು ಬರೆಯಿಸಿ ಕೊಡಬೇಕು" ಎಂದು ಕೇಳಿಕೊಂಡರು.

"ಅಯ್ಯೋ, ಅಪ್ಪಗಳಿರಾ ! ನಾನು ಕೂಡಾ ಧರ್ಮ ಮಾರ್ಗ ತಪ್ಪಿದವಳೇ. ಒಂದು ಸಾರಿ ನನ್ನ ಹಿರಿಯ ಕುಮಾರನು ನನಗೆ ಒಂದು ಸುವರ್ಣ ಹಾರವನ್ನು ಕಾಣಿಕೆ ಕೊಟ್ಟನು. ನನ್ನ ಹಿರಿಯ ಸೊಸೆ ಐಶ್ವರ್ಯ ವಂತಳೆಂಬ ಉದ್ದೇಶದಲ್ಲಿ ನಾನು ಆ ಹಾರವನ್ನು ತೆಗೆದುಕೊಂಡು ಹೋಗಿ ಚಿಕ್ಕ ಸೊಸೆಗೆ ಕೊಟ್ಟೆನು. ಆದರೆ ಕೊಟ್ಟ ಮರು ಕ್ಷಣದಲ್ಲಿ ನನ್ನಲ್ಲಿ ಹುಟ್ಟಿದ ಭೇದ ಬುದ್ಧಿ ಅರ್ಥವಾಗಿ ಮನಸ್ಸಿನೊಳಗೇ ಕೊರಗಿ ಕೊಂಡಿದ್ದೇನೆ. ಆದುದರಿಂದ ಒಬ್ಬರಿಗೆ ಧರ್ಮಗಳನ್ನು ಬರೆದುಕೊಡುವಷ್ಟು ಯೋಗ್ಯತೆ ನನಗೆ ಇಲ್ಲ. ಬೇರೆ ಯಾರನ್ನಾದರೂ ಕೇಳಿ ನೋಡಿರಯ್ಯ" ಎಂದಳು ರಾಜಮಾತೆ.

ಕಳಿಂಗ ಮಂತ್ರಿಗಳು ಅಲ್ಲಿಂದ ರಾಜನ ಸಹೋದರ ನಾದ ನಂದನ ಬಳಿಗೆ ಹೋಗಿ, ತಮ್ಮ ಸಂಗತಿಯನ್ನು ಹೇಳಿದರು. ಅವನು ಮುಖವನ್ನು ಬಾಡಿಸಿಕೊಂಡು, ತಾನು ಕೂಡಾ ಒಂದು ಸಾರಿ ಧರ್ಮ ತಪ್ಪಿದೆನೆಂದು ಹೇಳ ತೊಡಗಿದನು :

"ನಾನು ಪ್ರತಿ ಸಾಯಂಕಾಲವೂ ರಾಜಾಂತಃ ಪುರಕ್ಕೆ ರಥದಲ್ಲಿ ಹೋಗುವುದು ಪದ್ಧತಿ. ಒಂದೊಂದು ರಾತ್ರಿ ಅಲ್ಲಿಯೇ ಇದ್ದು ಬಿಡುತ್ತೇನೆ. ನಾನು ಚಾಟಿಕೊರಡೆಯನ್ನು ರಥದಲ್ಲೇ ಇಟ್ಟು ಹೋದರೆ ರಾತ್ರಿಯಲ್ಲಿ ಅಲ್ಲಿ ಉಳಿಯುವುದಿಲ್ಲವೆಂದು ಅರ್ಥ. ಆಗ ಸಾರಥಿ ನನಗಾಗಿ ರಥದಲ್ಲಿ ಕಾದಿರುತ್ತಾನೆ. ಚಾಟಿ ಕೊರಡೆಯನ್ನು ತೆಗೆದುಕೊಂಡು ಹೋದರೆ ರಾತ್ರಿ ಅಲ್ಲೇ ಇರುವೆನೆಂದು ಅರ್ಥ. ಆಗ ಸಾರಥಿ ನನಗಾಗಿ ಕಾಯದೆ ರಥವನ್ನು ತೆಗೆದುಕೊಂಡು



ಹೋಗಿ, ಮಾರಣೇದಿನ ಬೆಳಗ್ಗೆ ಮತ್ತೆ ತರುತ್ತಾನೆ. ಒಂದು ದಿನ ನಾನು ಚಾಟಿಕೊರಡೆಯನ್ನು ರಥದಲ್ಲೇ ಬಿಟ್ಟು ರಾಜಾಂತಃಪುರಕ್ಕೆ ಪ್ರವೇಶಿಸಿದೆನು. ಹಿಂದಿರುಗಿ ಬರಬೇಕೆಂಬುದೇ ನನ್ನ ಉದ್ದೇಶವಾಗಿತ್ತು. ಆದರೆ ಅಷ್ಟರಲ್ಲಿ ಮಳೆ ಪ್ರಾರಂಭವಾಯಿತು. ರಾಜನಾಗಿರುವ ಧನಂಜಯ ಅಣ್ಣ ನನ್ನನ್ನು ಹೋಗಲು ಬಿಡಲಿಲ್ಲ. ಆ ರಾತ್ರಿ ರಾಜಾಂತಃಪುರದಲ್ಲೇ ಉಳಿದು ಬಿಟ್ಟೆನು. ನನ್ನ ಸಾರಥಿ ಮಳೆಯಲ್ಲಿ ನೆನೆಯುತ್ತಾ ನನ್ನ ದಾರೀ ನೋಡುತ್ತ ರಥದಲ್ಲೇ ಕಾದಿದ್ದನು. ಅವನನ್ನು ಆ ವಿಧವಾಗಿ ಕಷ್ಟಪಡಿಸಿ ನಾನು ಧರ್ಮವನ್ನು ತಪ್ಪಿದೆನು."

ಅಲ್ಲಿಯೂ ತಮ್ಮ ಕಾರ್ಯವಾಗದೆ, ಕಡೆಗೆ ರಾಜ ಪುರೋಹಿತನಾದರೂ ತಮ್ಮ ಕೋರಿಕೆಯನ್ನು ಈಡೇರಿಸುವನೋ ಎಂಬ ಆಶೆಯಿಂದ ಕಳಿಂಗ ಮಂತ್ರಿ ಗಳು ಆತನ ಬಳಿಗೆ ಹೋದರು. ಅವನು ಕೂಡಾ ಧರ್ಮ ತಪ್ಪಿದೆನೆಂದು ಹೇಳುತ್ತ ಹೀಗೆಂದನು :

"ಒಂದು ದಿನ ನಾನು ರಾಜಭವನಕ್ಕೆ ಹೋಗುತ್ತಿದ್ದಾಗ ದಾರಿಯಲ್ಲಿ ಒಂದು ರಥವನ್ನು ನೋಡಿದೆ. ಅದು ಪೂರ್ತಿ ಬಂಗಾರದ ಹೊದಿಕೆಯುಳ್ಳದಾಗಿತ್ತು. ಅದನ್ನು ನೋಡಿದ ಕೂಡಲೇ ನನಗೊಂದು ಆಶೆ ಎದ್ದಿತು. ಆ ರಥವನ್ನು ಮಹಾರಾಜನು ನನಗೆ ದಾನ ಕೊಟ್ಟರೆ ಎಷ್ಟು ಒಳ್ಳೆಯದಿತ್ತು ಅಂದುಕೊಂಡೆನು. ಹಾಗೆಯೇ ನಾನು ರಾಜಭವನವನ್ನು ಪ್ರವೇಶಿಸಿ, ರಾಜನನ್ನು ನೋಡಿದ ಕೂಡಲೇ ರಾಜನು ಪುರೋಹಿತರೇ, ನೀವು ದಾರಿಯಲ್ಲಿ ನೋಡಿದ ರಥವನ್ನು ನೀವೇ ತೆಗೆದುಕೊಂಡು ಬಿಡಿರಿ. ಅದು ನಿಮಗೇ' ಎಂದನು. ಆಗಲೇ ನನ್ನ ಲೋಭವನ್ನು ನೆನೆದು ಪಶ್ಚಾತ್ತಾಪ ಪಟ್ಟು, ರಥವು ನನಗೆ ಬೇಡವೆಂದು ಹೇಳಿಬಿಟ್ಟೆ. ಆದುದರಿಂದ ನಾನು ನಿಮಗೆ ಧರ್ಮವನ್ನು ಬರೆದು ಕೊಡಲು ಯೋಗ್ಯನಲ್ಲ."

ಕಳಿಂಗದ ಮಂತ್ರಿಗಳಿಗೆ ಏನು ಮಾಡುವುದೆಂದು ತೋರಲಿಲ್ಲ. ಕಟ್ಟಕಡೆಗೆ ಅಲ್ಲಿಯ ಮಂತ್ರಿಯ ಮೇಲೆಯೇ ನಂಬುಗೆಯಿಟ್ಟು ಅವನನ್ನೇ ಬರೆದು ಕೊಡಲು ಕೇಳಿಕೊಂಡರು. ಅವನು ಕೂಡಾ ಆಶಾಭಂಗವನ್ನೇ ಉಂಟುಮಾಡಿದನು.

"ಒಂದು ದಿನ ನಾನು ನನ್ನ ರೈತರಿಗೆ ಸಂಬಂಧಿಸಿದ ಹೊಲಗಳ ಅಳತೆ ತೆಗೆಸಲು ಹೋದೆ. ಅಳತೆಗೆ ಸರಿಯಾಗಿ ಗೂಟದ ಕೋಲು ಹುಗಿಯಬೇಕಾದ ಜಾಗದಲ್ಲಿ ಚಿಕ್ಕದೊಂದು ಬಿಲವಿದ್ದಿತು. ಅದರೊಳಗೆ ಯಾವ ಪ್ರಾಣಿಯಾದರೂ ಇರಬಹುದೆಂದು ಅನುಮಾನವಾಯಿತು. ಆದರೆ ಗೂಟವನ್ನು ಈಚೆಗೆ ನೆಟ್ಟುಬಿಟ್ಟರೆ ರೈತನಿಗೆ ನಷ್ಟ; ಆಚೆಗೆ ನೆಟ್ಟುಬಿಟ್ಟರೆ ರಾಜನಿಗೆ ನಷ್ಟ. ಆದುದರಿಂದ ಆ ಬಿಲದಲ್ಲೇ ಗೂಟ ನೆಡಲು ಹೇಳಿದೆನು. ಅದೇ ಸಮಯದಲ್ಲಿ ಒಂದು ಏಡಿ ಆ ಬಿಲದೊಳಗಿನಿಂದ ಹೊರಗೆ ಬರುತ್ತ ಗೂಟದ ಕೋಲಿನ ಕುತ್ತು ತಗಲಿ ಸತ್ತು ಹೋಯಿತು. ಇಂತಹ ಪಾಪ ಮಾಡಿಸಿದ ನಾನು ಕೂಡಾ ಧರ್ಮ ತಪ್ಪಿದೆನು. ಇನ್ನು ಧರ್ಮಸೂತ್ರ ಬರೆದು ಕೊಡುವ ಯೋಗ್ಯತೆ ಎಲ್ಲಿಂದ ಬಂತು ?"

ಇಷ್ಟಾದ ಮೇಲೆ ಕಳಿಂಗದ ಮಂತ್ರಿಗಳಿಗೆ ಒಂದು ಆಲೋಚನೆ ಬಂದಿತು. ತಾವು ಕೇಳಿದ ಈ ಕಥೆಗಳನ್ನೇ ಬಂಗಾರದ ರೇಕುಗಳಲ್ಲಿ ಬರೆದು ಅವುಗಳನ್ನು ತೆಗೆದುಕೊಂಡು ಹೋಗಿ ತಮ್ಮ ರಾಜನ ಇದಿರಿನಲ್ಲಿ ಓದಿ ತೋರಿಸಿದರು, ಧರ್ಮದ ವಿಷಯದಲ್ಲಿ ಶ್ರದ್ಧೆಯಿಂದಿರುವುದೇ ಉತ್ತಮ ಧರ್ಮವೆಂದು ಕಾಳಿಂಗ ರಾಜನಿಗೆ ಗೊತ್ತಾಯಿತು. ಅಂದಿನಿಂದ ಆತ್ಮವಿಮರ್ಶನೆ ಮಾಡಿಕೊಳ್ಳುವ ಅಭ್ಯಾಸ ವಿಟ್ಟುಕೊಂಡು ಪರಿಪಾಲನೆಯನ್ನು ಸಾಗಿಸಿದನು. ಕೂಡಲೇ ಮಳೆ ಬರ ತೊಡಗಿತು. ಕ್ಷಾಮವು ಮಾಯವಾಗಿ ಪ್ರಜೆಗಳು ಸುಖವಾಗಿ ಜೀವಿಸ ತೊಡಗಿದರು.





## ಪೃಥ್ವೀರಾಜ ಮತ್ತು ಸಂಯುಕ್ತೆ–೩

ಪೃಥ್ವೀರಾಜನ ಮಿತ್ರನೂ, ಆಸ್ಥಾನ ಕವಿಯೂ ಆದ ಚಾಂದನು ತನ್ನ ಯಜಮಾನನನ್ನು ಕೂಡಿಕೊಂಡನು. ಅವರಿಬ್ಬರೂ ಮಾರುವೇಷದಲ್ಲಿ ಕನೋಜಕ್ಕೆ ಬಂದರು. ಜಯಚಂದ್ರನ ಆಶ್ವಿಕರು ಅವರನ್ನು ಹಿಡಿಯುವ ಪ್ರಯತ್ನದಲ್ಲಿ ವಿಫಲರಾಗಿಹೋದರು.

ಕನೋಜರಾಜ್ಯದ ಸರಿಹದ್ದಿನಲ್ಲಿ ಪೃಥ್ವೀರಾಜನ ಮಿಂಚಿನ ವೇಗದ ಸೈನಿಕರು ಅಡಗಿಕೊಂಡಿದ್ದರು. ಪೃಥ್ವೀರಾಜನೂ ಸಂಯುಕ್ತೆಯೊಂದಿಗೆ ಸರಿಹದ್ದು ದಾಟಿದ ಕೂಡಲೇ, ಅವರು ಹೊರಬಿದ್ದು ಜಯಚಂದ್ರನ ಆಶ್ವಿಕರನ್ನು ಇದಿರಿಸಿ ಹೊಡೆದು ಸೋಲಿಸಿ ಓಡಿಸಿದರು.





ಈ ಸಂಘಟನೆಯಿಂದ ತನ್ನ ಆತ್ಮಗೌರವವು ಹೋಯಿತೆಂದು ಜಯಚಂದ್ರನು ಬಾಪಿಸಿ ಒಸಳವಾಗಿ ಕುಂದಿದನು. ಹಗಲೂ ರಾತ್ರಿ ಪೃಥ್ವೀರಾಜನ ಮೇಲೆ ಹೇಗೆ ಹಗೆ ತೀರಿಸುವುದೆಂದೇ ಅವನ ಯೋಚನೆಯಾಯಿತು. ಅವನು ಎಷ್ಟೇ ಕೇಳಿಕೊಂಡರೂ ಬೇರೆ ರಾಜಪುತ್ರರು ಪೃಥ್ವೀರಾಜನ ಮೇಲೆ ಯುದ್ಧಕ್ಕೆ ಒಪ್ಪಲಿಲ್ಲ.



ಈ ಪರಿಸ್ಥಿತಿಯಲ್ಲಿ, ಜಯಚಂದ್ರನಿಗೆ ವಿನಾಶಕಾರಿಯಾದ ದುರ್ಬುದ್ಧಿ ಹುಟ್ಟಿತು. ಡಿಲ್ಲಿಯ ಮೇಲೆ ದಾಳಿಮಾಡುವೆಯಾದರೆ ಅದಕ್ಕೆ ತಾನು ಸಹಾಯ ಮಾಡುವೆನೆಂದು, ಅವನು ಗೋರೀ ಮಹಮ್ಮದನಿಗೆ ತಿಳಿಯಪಡಿಸಿದನು. ಮಹಮ್ಮದನಿಗಾದ ಸಂತೋಷ ಹೇಳಿ ತೀರದು. ಜಯಚಂದ್ರನ ಸಹಾಯದಿಂದ ಡಿಲ್ಲಿಯನ್ನು ಜಯಿಸುವ ಆಶೆಯೂ ತವಕವೂ ಅವನಲ್ಲಿ ಉಕ್ಕಿತು.

ಡಿಲ್ಲಿಯಲ್ಲಿ ಪೃಥ್ವೀರಾಜನು ಸಂಯುಕ್ತೆಗಾಗಿ ನೂತನ ಭವನವನ್ನು ಕಟ್ಟಿಸಿದನು. ಅವರಿಬ್ಬರಿಗೂ ಸುಖವಾಗಿ ಕಾಲ ಕಳೆಯುತ್ತಿದ್ದಿತು. ಯುದ್ಧದ ಭಯವೇನೂ ಇಲ್ಲದುದರಿಂದ ಪೃಥ್ವೀರಾಜನು ಪ್ರಜೆಗಳಿಗೆ ಹಿತಕರವಾದ ಒಳ್ಳೊಳ್ಳೆಯ ಕಾರ್ಯಕ್ರಮಗಳನ್ನು ಪ್ರಾರಂಭಿಸಿದನು.





ಅವನು ಸ್ವಲ್ಪವೂ ಊಹಿಸಿರದಂತೆ ಗೋರೀ ಮಹಮ್ಮದ್ ಮತ್ತು ಜಯಚಂದ್ರನ ಸೈನ್ಯಗಳು ಡಿಲ್ಲಿಯ ಮೇಲೆ ದಾಳಿಮಾಡಲು ಹೊರಟುವು. ಆ ಸೈನಿಕರು ದಾರಿಯಲ್ಲಿದ್ದ ಗ್ರಾಮಗಳನ್ನು ಸುಟ್ಟರು. ಸರಿಹದ್ದಿನಲ್ಲಿದ್ದ ರಕ್ಷಣೆಯ ಸೈನಿಕರೂ ಪ್ರಜೆಗಳೂ ಆಶ್ಚರ್ಯಪಟ್ಟರು.

ಗಡಿರಕ್ಷಕ ಸೈನಿಕರು ಡಿಲ್ಲಿಗೆ ಓಡಿಬಂದು, ಶತ್ರುಗಳ ಆಗಮನವನ್ನು ಕುರಿತು ಪೃಥ್ವೀರಾಜನೊಂದಿಗೆ ಹೇಳಿದರು. ಅವನು ಆಕೂಡಲೇ ತನ್ನ ಸೈನ್ಯವನ್ನು ಸೇರಿಸಿ ಯುದ್ಧಸನ್ನದ್ಧವಾಗುವಂತೆ ಮಾಡಿದನು.





ಸಂಯುಕ್ತೆ ಸ್ವತಃ ಪೃಥ್ವಿರಾಜನ ತಲೆಯಮೇಲೆ ಶಿರಸ್ತ್ರಾಣವಿಟ್ಟು ಅಲಂಕರಿಸಿದಳು. ಅವನು ಅವಳಿಗೆ ವಿದಾಯ ಹೇಳಿ ಶತ್ರುಗಳನ್ನು ಇದಿರಿಸಲು ಹೊರಟನು. ಆಗ ಶತ್ರುಗಳು ನಗರದ ಪಕ್ಕಕ್ಕೇ ಬಂದಿದ್ದರು.

ಅಷ್ಟು ಬೇಗದಲ್ಲಿ ಶತ್ರುಗಳು ನಗರವನ್ನು ಸಮೀಪಿಸುವರೆಂದು ಯಾರೂ ಊಹಿಸಿರಲಿಲ್ಲ. ಪೃಥ್ವೀರಾಜನು ಸೈನಿಕರನ್ನು ಉತ್ಸಾಹಪಡಿಸಿ ಶತ್ರುವನ್ನು ಇದಿರಿಸಿದನು.





ಪೃಥ್ವೀರಾಜನ ಸೈನಿಕರು ತುಂಬಾ ಧೈರ್ಯ ಸಾಹಸಗಳಿಂದ ಹೋರಾಡಿದರೂ, ಜಯಚಂದ್ರ ಮತ್ತು ಗೋರೀ ಮಹಮ್ಮದರ ಐಕಮತ್ಯದ ಸೈನಿಕ ಸಂಖ್ಯೆ ಅವರಿಗಿಂತ ಎಷ್ಟೋ ಪಾಲು ಹೆಚ್ಚು. ಪೃಥ್ವೀರಾಜನು ಯುದ್ಧದಲ್ಲಿ ಗಾಯ ಗೊಂಡು ಬಿದ್ದು ಸತ್ತನು.

ಈ ದುರ್ವಾರ್ತೆ ಸ್ವಲ್ಪ ಹೊತ್ತಿನೊಳಗೆ ಸಂಯುಕ್ತೆಗೆ ಸೇರಿತು. ಅವಳು ಆತ್ಮ ತ್ಯಾಗ ಮಾಡಿಕೊಳ್ಳಲು ಅಗ್ನಿಕುಂಡವನ್ನು ಸಿದ್ಧಮಾಡಿಸಿದಳು. ಬಳಿಕ ಪೃಥ್ವೀರಾಜನ ಚಿತ್ರಪಟಕ್ಕೆ ಹೂ ಮಾಲೆಗಳನ್ನು ಹಾಕಿ, ಅಗ್ನಿಪ್ರವೇಶ ಮಾಡಿದಳು.





ಪೃಥ್ವೀರಾಜನ ಮರಣದಿಂದ ಢಿಲ್ಲಿಯಲ್ಲಿ ಹಿಂದೂ ಪರಿಪಾಲನೆ ಅಂತರಿಸಿ ಹೋಯಿತು. ತಾನು ಸಾಧಿಸಿದ ವಿಜಯಕ್ಕೆ ಸಂತೋಷಪಡಲು ಜಯಚಂದ್ರನಿಗೆ ಹೆಚ್ಚು ಸಮಯದಕ್ಕಲಿಲ್ಲ. ಮಾರನೆಯ ವರ್ಷದಲ್ಲೇ ದುರಾಶಾಪರನಾದ ಗೋರೀ ಮಹಮ್ಮದ್ ಕನೋಜದ ಮೇಲೆ ದಾಳಿ ಮಾಡಿದನು. ಅವನ ಸೇನಾನಾಯಕನಾದ ಕುತ್ಬುದ್ದೀನ್ ನಿರ್ದಾಕ್ಷಿಣ್ಯವಾಗಿ ಜಯಚಂದ್ರ ನನ್ನು ಕೊಂದುಬಿಟ್ಟನು.



# ಗಂಡನ ವಿಧೇಯತೆ

ಒಂದು ಊರಿನಲ್ಲಿ ಭೀಮರಾಜನೆಂಬೊಬ್ಬನಿಗೆ, ಮದುವೆಯಾದ ಮೇಲೆ, ಒಂದು ಹೆಸರು ಬರಲು ಪ್ರಾರಂಭವಾಯಿತು. ಆದರಿಂದ ಆವನ ಹೆಸರಿಗಿರುವ ಗಾಂಭೀರ್ಯತೆ ಕುಂದುತ್ತಾ ಬಂತು. ಬೆದರುಗೇಡ ಭೀಮರಾಜನೆಂದು ಆವನಿಗೆ ಬಂದ ಹೆಸರು. ಅವನು ಯಾವ ಬೀದಿಯಲ್ಲಾದರೂ ಇದಿರುಬಿದ್ದಾಗ, ನಾಲ್ಕು ಮಂದಿ ಮರೆಯಾಗಿ ನಗುತ್ತಿದ್ದರು, ನಿಜಕ್ಕೂ ಅವನು ಹೆಂಡತಿಯ ಮಾತಿಗೆ ಇದಿರಾಡುವವನಲ್ಲ.

ಭೀಮರಾಜನಿಗೆ ರಾಮರಾಜನೆಂಬ ವಿಶ್ವಾಸದ ಸ್ನೇಹಿತನಿದ್ದನು. ಒಂದು ದಿನ ಅವನು ತನ್ನ ಚಿಂತೆಯನ್ನು ಕುರಿತು ಅವನೊಂದಿಗೆ ಹೇಳಿಕೊಂಡನು.

"ಎಲ್ಲರೂ ನಿನ್ನನ್ನು ಹಾಗೆ ಹೇಳಲಿಕ್ಕೆ ಕಾರಣ, ನೀನು ಅವಳ ಮಾತಿಗೆ ಏನೂ ಎದುರು ಹೇಳುವುದಿಲ್ಲ. ಆದರಿಂದ ನೀನು ಅವಳಿಗೆ ಹೆದರುವ ಹಾಗೆ ಕಾಣುತ್ತದೆ. ಇನ್ನು ಮೇಲೆ ಹೆಂಡತಿ ಹೇಳಿದ ಮಾತನ್ನು ಕೇಳಬೇಡ" ಎಂದನು ರಾಮರಾಜ.

ಭೀಮರಾಜನು ಸ್ವಲ್ಪ ಆಲೋಚಿಸಿದನು. ಅವಳ ಮಾತು ಕೇಳದೇ ಹೋದರೆ ಅವಳು ದೊಡ್ಡ ರಗಳೆ ಮಾಡುತ್ತಾಳೆ. ಆ ಮೇಲೆ ಅವಳ ಕಾಟತಾಳಿಕೊಳ್ಳುವುದು ಹೇಗೆ? ಸಾಧ್ಯವಿಲ್ಲಪ್ಪ. ಆದರಿಂದ ಇನ್ನಿಷ್ಟು ಕಷ್ಟ ಬರುತ್ತೆಕಣೋ!" ಎಂದನು.

"ನೋಡಿದೆಯಾ? ನಿನಗೆ ಅರಿಯದಂತೆಯೇ ನೀನು ಹೆಂಡತಿಗೆ ವಿಧೇಯನಾಗಿರುವಷ್ಟು ಆಳಕ್ಕೆ ಇಳಿದಿರುವಿ! ಸರಿ. ಇನ್ನೊಂದು ಆಲೋಚನೆ ಹೇಳುತ್ತೇನೆ. ನೀನು ಹೇಳುವ ಮಾತನ್ನು ನಿನ್ನ ಹೆಂಡತಿ ಕೇಳುವ ಹಾಗೆ ಮಾಡಬಲ್ಲೆಯಾ?" ಎಂದನು.

ಭೀಮರಾಜನು ಮತ್ತೆ ಆಲೋಚನೆಗೆ ಬಿದ್ದನು. ರಾಮರಾಜನು ಮೊದಲು ಹೇಳಿದ ಆಲೋಚನೆಗಿಂತಲೂ ಇದು ಇನ್ನಿಷ್ಟು ಕಷ್ಟವಾಗಿ ಕಂಡಿತು. ಹೆಂಡತಿಯ ಮಾತಿಗೆ ಇದಿರಾಡದಿರುವುದು, ಅವಳು ಹೇಳಿದುದನ್ನು ಕೇಳಿಸದಂತೆ ಸುಮ್ಮನಿರುವುದು, ಅವಳ ಮಾತನ್ನು ಅಲ್ಲಗಳೆದು ಮಾತಾಡುವುದು ಇವಿಷ್ಟು ತನ್ನ ಇಷ್ಟಕ್ಕೆ ಸಂಬಂಧಿಸಿದ್ದಾದರೆ, ತಾನು ಹೇಳಿದುದನ್ನು ಅವಳು ಕೇಳುವ ಹಾಗೆ ಮಾಡುವ ಕೆಲಸ ತನ್ನ ಕೈಯಲ್ಲಿಲ್ಲದ್ದು. ಇದನ್ನೇ ಅವನು ಸ್ನೇಹಿತನೊಂದಿಗೆ ಹೇಳಿದನು. ಅದನ್ನು ಕೇಳಿ ರಾಮರಾಜನಿಗೆ ದೊಡ್ಡ ನಗು ಬಂದಿತು. "ಈಗ ನಾನು ಹೇಳಿದ ಎರಡು ಆಲೋಚನೆಗಳಲ್ಲಿ ಒಂದು ಕೂಡಾ ಆಚರಣೆಗೆ

ಬಿ. ಎ. ರಾವ್



ತರಲು ನಿನ್ನಿಂದಾಗದೆಂದು ಗೊತ್ತಾಯಿತು. ಈಗ ಗೊತ್ತಾಯಿತೇ ನಿನ್ನ ಮೇಲೆ ಬಂದ ಅಪವಾದ ಹೋಗಬೇಕಾದರೆ ಎಷ್ಟು ಕಷ್ಟವಿದೇ ಅಂತ?" ಎಂದನು ರಾಮರಾಜ.

ಭೀಮರಾಜನು ಮುಖ ಬಾಡಿಸಿಕೊಂಡು, "ಹಾಗಾದರೆ ಬೇರೇನೂ ಉಪಾಯವಿಲ್ಲವೆನ್ನುವಿಯಾ?" ಎಂದನು ದೀನ ಸ್ವರದಲ್ಲಿ.

ರಾಮರಾಜನು ಸ್ವಲ್ಪ ಆಲೋಚಿಸಿ, "ಒಂದು ಕೆಲಸ ಮಾಡೋಣ. ನನ್ನ ಮನೆಯಲ್ಲಿ ಏನೋ ಒಂದು ಶುಭಕಾರ್ಯವೆಂದು ಹೇಳಿ ನಿಮ್ಮಿಬ್ಬರನ್ನೂ ಊಟಕ್ಕೆ ಆಹ್ವಾನಿಸುತ್ತೇನೆ. ನಿನ್ನ ಹೆಂಡತಿಯ ಮನಸ್ಸತ್ವ ಎಂತಹುದೆಂಬುದನ್ನು ಗಮನಿಸಿ ನೋಡಿ ಆಮೇಲೆ ಹೇಳುತ್ತೇನೆ" ಎಂದನು.

ಈ ಮಾತು ಕೇಳಿ ಭೀಮರಾಜನು ಸಂತೋಷದಿಂದ ಒಪ್ಪಿಕೊಂಡನು. ಮುಂದೆ ನಾಲ್ಕು ದಿನಗಳ ಮೇಲೆ ರಾಮರಾಜನು ಭೀಮರಾಜನ ಮನೆಗೆ ಬಂದು, ತನ್ನ ಮನೆಯಲ್ಲಿ ದುರ್ಗಾಪೂಜೆ ಎಂದು ಹೇಳಿ, ಭೋಜನಕ್ಕೆ ಬರಬೇಕೆಂದು ಭೀಮರಾಜ ದಂಪತಿಗಳನ್ನು ಆಮಂತ್ರಿಸಿ, ಹೊರಟು ಹೋದನು.

ಭೀಮರಾಜನ ಹೆಂಡತಿ ಕಾಂತಿಮತಿ, ಗಂಡನನ್ನು ಅಂಕೆಯಲ್ಲಿಡುವಂತಹ ಗಯ್ಯಾಳಿ ಸ್ವಭಾವದವಳೇನಲ್ಲ. ತನ್ನ ಸಮಾನರಾದ ಸ್ತ್ರೀಯರಿಗಿಂತ ತನಗೇನೋ ಆಧಿಕ್ಯತೆ ಇರುವುದೆಂದು ಕಾಣುವಂತೆ ಮಾಡಲು ವರ್ತಿಸುತ್ತಿದ್ದಳು. ಅವಳಿಗೆ ತಕ್ಕ ಗಂಡನೇ ಸಿಕ್ಕಿದ್ದ. ತನ್ನ ಗಂಡ ತಾನು ಹೇಳುವ ಹಾಗೆ ಕೇಳುತ್ತಾನೆಂದು ಇತರರಿಗೆ ತೋರಿಸಿಕೊಳ್ಳುವುದು ಅವಳಿಗೊಂದು ಹೆಚ್ಚಳವೆನಿಸಿತ್ತು. ತಾನು ಹೇಳುವುದೆಲ್ಲ ಸರಿಯಾದುದರಿಂದಲೇ ತನ್ನ ಗಂಡನು ಮಾತಾಡುವುದಿಲ್ಲವೆಂದು ಅವಳ ನಂಬುಗೆ.

ಭೀಮರಾಜನೂ ಕಾಂತಿಮತಿಯೂ ರಾಮರಾಜನ ಮನೆಗೆ ಊಟಕ್ಕೆ ಹೋದರು. ರಾಮರಾಜನು ಅವರನ್ನು ಸಂತೋಷದಿಂದ ಸ್ವಾಗತಿಸಿ, "ಇವತ್ತಿನ ದುರ್ಗಾಪೂಜೆ ಒಂದು ನೆವನ ಅಷ್ಟೇ. ನಿಜ ಸಂಗತಿ, ಇವತ್ತು ನಮಗೆ ಮದುವೆಯಾಗಿ ಐದನೇ ವರ್ಷ ತುಂಬಿತು. ಅದಕ್ಕೇ ಈ ಔತಣ" ಎಂದನು.

ಎಲ್ಲರೂ ಊಟಕ್ಕೆ ಕುಳಿತು ಬೋಜನ ನಡೆಯುತ್ತಿದ್ದಾಗ ರಾಮರಾಜನು ಪ್ರತಿ ಪದಾರ್ಥಕ್ಕೂ ಆಕ್ಷೇಪ ಹೇಳುತ್ತ ಹೆಂಡತಿಯ ಮೇಲೆ ರೇಗುತ್ತಾ ಇದ್ದನು. ಇದಕ್ಕೆ ಉಪ್ಪು ಕಡಿಮೆ. ಇದು ಎರಿ ಖಾರ, ಇದು ಕಹಿ ಬರಲು ಏನಾಯಿತು? ಇಷ್ಟು ವರ್ಷವಾದರೂ ಸರಿಯಾಗಿ ಅಡಿಗೆ ಮಾಡಲು ಬರೋದಿಲ್ಲ ಅಂದರೇನು? ಎನ್ನುತ್ತ ಆಗಾಗ ಹೆಂಡತಿಯ ಮೇಲೆ ರೇಗಿ ಬೀಳುತ್ತಿದ್ದರೂ ಅವನ ಹೆಂಡತಿ ಬಹಳ ವಿನಯದಿಂದ ಮಾತಾಡದೆ ಸಹಿಸಿಕೊಂಡಿದ್ದಳು. ಒಂದೆರಡು ಬಾರಿ ತಪ್ಪು ಒಪ್ಪಿಕೊಂಡು ಕ್ಷಮೆ ಕೇಳಿದಳು.

ಇದನ್ನು ನೋಡುತ್ತಿದ್ದ ಕಾಂತಿಮತಿಗೆ ತನ್ನ ಶರೀರದ ಮೇಲೆ ಚೇಳೋ ಜರಿಯೋ ಹರಿ

ದಾಡುವ ಹಾಗೆ ತೋರಿತು. ಅವಳ ದೃಷ್ಟಿಯಲ್ಲಿ ರಾಮರಾಜನು ಪರಮ ಕಿರಾತನಂತೆ ಕಂಡನು.

ಎಲ್ಲಾ ಆದಮೇಲೆ ಕಾಂತಿಮತಿ ರಾಮರಾಜನ ಹೆಂಡತಿಯನ್ನು ಗುಟ್ಟಾಗಿ ಮೂಲೆಯಲ್ಲಿ ಸಂಧಿಸಿ, "ನಿಮ್ಮವರು ಪ್ರತಿ ಸಣ್ಣ ವಿಷಯಕ್ಕೂ ಅಷ್ಟೊಂದು ಬೈಯುತ್ತಾ ಇರುವಾಗ ನೀವು ಬಾಯಿ ಮುಚ್ಚಿ ಗಂಗೆತ್ತಿನ ಹಾಗೆ ತಲೆಯಾಡಿಸುವುದೆಂದರೇನಿದು ? ನಾನಾಗಿರುತ್ತಿದ್ದರೆ ?" ಎಂದು ಸಿಟ್ಟಿನಿಂದ ಮುಷ್ಟಿ ಬಿಗಿದು ಕೊಂಡಳು.

ರಾಮರಾಜನ ಹೆಂಡತಿ ಮುಗುಳು ನಗುತ್ತ, "ಕಾಂತಿಮತಮ್ಮಾ. ನೀವೂ ನನ್ನ ಅಡಿಗೆ ಉಂಡಿರಷ್ಟೆ? ರುಚಿಯಾಗಿತ್ತೋ ಇಲ್ಲವೋ ? ಬಹಳ ಚೆನ್ನಾಗಿದೇ ಅಂತ ಹೊಗಳಿ ಹೊಗಳಿ ಹಾಡುತ್ತಾ ಇದ್ದರೆ ನಮಗೆ ಗರ್ವಬರುತ್ತದೆ, ಹೊಗಳಬೇಡೀ ಅಂತ ನಾನೇ ಅವರಿಗೆ ಹೇಳಿದ್ದೆ. ಹಾಗಾದರೆ ಬಯ್ತಾ ಇರ್ತೇನೆ ಅಂದರು. ಅಷ್ಟೇ ವಿಷಯ." ಎಂದು ಸ್ವಲ್ಪ ಹೊತ್ತು ನೆಗಾಡಿ, "ಹಾಗಂತ ಅವರಿಗೆ ಸಿಟ್ಟೇ ಬರುವುದಿಲ್ಲ ಅಂದುಕೊಳ್ಳಬೇಡೀ. ಸಂಸಾರ ಅಂತ ಆದಮೇಲೆ ಏನೋ ಅಭಿಪ್ರಾಯ ಭೇದ ಬರುತ್ತೇ. ಇಬ್ಬರೂ ಜಗಳಾಡಿಕೊಳ್ತೇವೆ. ಆಮೇಲೆ ಅವರು ತಮ್ಮ ತಪ್ಪು ತಿಳಿದುಕೊಂಡು, ನನ್ನನ್ನು ಸಮಾಧಾನ ಪಡಿಸುತ್ತಾರೆ. ನಾನೂ ಅಷ್ಟೇನೇ. ಅವರಿಗೆ ಹೆದರಿಕೊಂಡೇನೂ ನಾನಿಲ್ಲ. ಹಾಗೆಯೇ ನನಗೆ ಹೆದರಿ ಅವರೂ ಇಲ್ಲ." ಎಂದು ಇನ್ನಷ್ಟು ನಕ್ಕಳು.

ಕಾಂತಿಮತಿಯ ತಲೆಗೆ ಹೊಸ ಆಲೋಚನೆ ಹೊಕ್ಕಿತು. ರಾಮರಾಜನ ಹೆಂಡತಿಯ ಮಾತಿನಲ್ಲಿ ತನಗೆ ತಿಳಿಯದ ಅಪೂರ್ವ ರುಚಿಯೊಂದು ಇರುವಂತೆ ಅವಳಿಗೆ ತೋರಿತು.

ಭೀಮರಾಜನು ಹೆಂಡತಿಯೊಂದಿಗೆ ಮನೆಗೆ ಹಿಂದಿರುಗುತ್ತ, "ಛೀ ! ಎಂಥಾಮೂರ್ಖ ಆ ರಾಮರಾಜ ! ಮಾತು ಮಾತಿಗೂ ಹಾಗೆ ಬಯ್ಯುವು ದೆಂದರೇನು ? ಪಾಪ, ಹೆಂಡತಿಯನ್ನು ಬೇಯಿಸಿ ಬೆಂಡು ಮಾಡುತ್ತಾನೆ ! ರಾಕ್ಷಸ !" ಎಂದನು. ಗಂಡನ ಮಾತು ಕೇಳಿ ಕಾಂತಿಮತಿ ಸ್ವಲ್ಪ ಹೊತ್ತು



ಮೌನವಾಗಿದ್ದು, "ನಮ್ಮಲ್ಲಿ ಮಾತ್ರ ಏನ: ಮತ್ತೆ? ಅವಳ ಹಾಗೇ ನೀವಿದ್ದೀರಿ. ನಾನು ಏನು ಹೇಳಿದರೂ ಗಂಗೆತ್ತಿನ ಹಾಗೆ ತಲೆಯಾಡಿಸುತ್ತೀರಿ. ನನ್ನ ಕೇಳಿದರೆ ನೀವು ಆ ರಾಮರಾಜರ ಹಾಗೆ ಪೌರುಷದಿಂದಿದ್ದರೇನೇ ಚಂದಾ ಅಂತ ನನಗೆ ಕಾಣುತ್ತೆ!" ಎಂದಳು.

ಭೀಮರಾಜನು ಬೆಚ್ಚಿಬಿದ್ದವನಂತೆ, "ಏನಂದೆ? ಛೆ ಛೆ! ನನಗೆ ಅಂಥಾ ಪ್ರವರ್ತನೆ ಇಷ್ಟವಾಗದು. ಹತ್ತು ಮಂದಿ ನನ್ನನ್ನು ಹೆಂಡತಿಗೆ ಬೆದರುವ ಗಂಡ ಅಂದುಕೊಂಡರೂ ಚಿಂತಿಲ್ಲ. ಆದರಿಂದ ನನಗಾಗುವ ನಷ್ಟವೇನಿವೆ? ನಿನ್ನ ಮೇಲೆ ಅಧಿಕಾರ ಮಾಡಲಾರೆ ನಪ್ಪ!" ಎಂದನು.

"ಅಧಿಕಾರ ಏನು ಬಂತು ಇದರಲ್ಲಿ? ನಿಮ್ಮನ್ನು ಹತ್ತು ಮಂದಿ ಹಾಗೆ ಹೇಳ್ತಾರೇ ಅಂತ ನನಗೂ ಗೊತ್ತು. ಅದೊಂದು ದೊಡ್ಡ ವಿಷಯ ಅಂತ ನಾನೂ ಇಷ್ಟು ದಿನ ಅಂದುಕೊಂಡಿದ್ದೆ. ಇವತ್ತು ಅಲ್ಲಿ ನಡೆದ ಸಂಗತಿ ನೋಡಿದ ಮೇಲೆ ನಾವೂ ಹಾಗಿರೋದೇ ಚಂದಾ ಅಂತ ಕಾಣುತ್ತೆ. ನೀವು ಬೈದರೆ ಹೇಗಿರುತ್ತೀರಿ ಅಂತ ನನಗೆ ನೋಡಬೇಕೂ ಅಂತ ಆಸೆಯಾಗಿದೆ. ಗಂಡನನ್ನು ಗೌರವಿಸುವ ವಿಷಯದಲ್ಲಿ ರಾಮರಾಜರ ಹೆಂಡತಿಗಿಂತ ನಾನೇನೂ ಕಡಿಮೆಯಾಗಲಾರೆ, ಬೇಕಾದರೆ ಜೋರು ಮಾಡಿ ನೋಡಿ!" ಎಂದಳು ಕಾಂತಿಮತಿ!

ಭೀಮರಾಜನು ಕೋಪದಿಂದ "ಸಾಕೇ ಬಾಯಿ ಮುಚ್ಚು!. ನಿನ್ನಿಂದ ನಾನೇನೂ ಬುದ್ಧಿ ಕಲಿಯ ಬೇಕಾಗಿಲ್ಲ!" ಎಂದು ಗರ್ಜಿಸಿ ಹೇಳಿದನು.

"ಹಾಗೇ ಗರ್ಜಿಸಿರಿ!" ಎಂದಳು ಕಾಂತಿಮತಿ ಗಲಗಲ ನಗುತ್ತಾ.

ಭೀಮರಾಜನಿಗೆ ನಿಜಕ್ಕೂ ಸಂತೋಷವಾಗಿತ್ತು. ಅಂದಿನಿಂದ ಅವನು ಹೆಂಡತಿಯ ಮುಂದೆ ಜೋರು ಮಾಡುತ್ತಾ ತಿರುಗತೊಡಗಿದನು. ತಾನು ಈಗ ಬೆದರುವ ಗಂಡನೇನಲ್ಲವೆಂದು ಹತ್ತು ಮಂದಿಗೆ ತಿಳಿಯುವಂತೆ ಮಾಡಲು, ತನ್ನ ಜನ್ಮದಿನದ ಹಬ್ಬವೆಂದು ಊರೊಳಗಿನ ತನ್ನ ಪರಿಚಯದವರನ್ನು ಊಟಕ್ಕೆ ಆಹ್ವಾನಿಸಿದನು. ಭೀಮರಾಜನು ಹೆಂಡತಿಗೆ ಎಷ್ಟು ವಿಧೇಯನೆಂಬುದನ್ನು ಪ್ರತ್ಯಕ್ಷ ನೋಡಲು ಅವರೆಲ್ಲಾ ಬಂದರು.

ಹಾಗೆ ಬಂದವರಿಗೆಲ್ಲಾ ಆಶಾಭಂಗವಾಯಿತು. ಔತಣದ ಊಟದ ಸಮಯದಲ್ಲಿ ಅನೇಕ ಬಾರಿ ಭೀಮರಾಜನು ಹೆಂಡತಿಯ ಮೇಲೆ ಕೋಪಿಸಿದನು. ಆಜ್ಞೆ ಮಾಡಿದನು. ಅವಳೂ ತುಂಬ ವಿನಯದಿಂದ ವರ್ತಿಸಿದಳು.

ಹೀಗೆ ತಮ್ಮ ಸಂಸಾರವನ್ನು ಸರಿಪಡಿಸಲು ಸಹಾಯಕನಾದ ರಾಮರಾಜನಿಗೆ ಕೃತಜ್ಞತೆ ಹೇಳಲು ಭೀಮರಾಜನು ಮರೆಯಲಿಲ್ಲ.



# ಅಡ್ಡ ಪ್ರಶ್ನೆ

ಒಂದು ಊರಿನಲ್ಲಿ ಕೋದಂಡನೆಂಬ ಸೊತ್ತು ಸಂಪನ್ನನಾದ ಗೃಹಸ್ಥನಿದ್ದನು. ಆತನ ಒಳ್ಳೆಯತನ, ಬುದ್ಧಿವಂತಿಕೆಯ ಚಮತ್ಕಾರದ ಮಾತು ಕಥೆಗಳನ್ನು ಕುರಿತು ಎಲ್ಲರೂ ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರು. ಅವನ ಮುಂದೆ ಸುಳ್ಳು ಹೇಳಿ ಗೆಲ್ಲಲು ಯಾರಿಗೂ ಸಾಧ್ಯವಾಗದು. ಎಷ್ಟೇ ಸಣ್ಣ ಸುಳ್ಳನ್ನಾದರೂ ಚಮತ್ಕಾರದ ಮಾತಿನಿಂದ ಅಡ್ಡ ಪ್ರಶ್ನೆ ಹಾಕಿ ಸತ್ಯವೇನೆಂದು ತಿಳಿಯುವ ಸಾಮರ್ಥ್ಯ ಅವನಿಗಿತ್ತು.

ಆತನಿಗೆ ಮದುವೆಯ ವಯಸ್ಸಿಗೆ ಬಂದ ಮಗಳಿದ್ದಳು. ಒಳ್ಳೆಯ ಆಸ್ತಿಪರನಾದ ಆತನೊಂದಿಗೆ ಸಂಬಂಧ ಬೆಳೆಸಲು ಅನೇಕರು ಬಂದು, ತಮಗಿರುವ ಆಸ್ತಿಪಾಸ್ತಿಗಳನ್ನು ಕುರಿತು ಅದುಯಿದೆ, ಇದುಯಿದೆ, ಹಾಗಿದೆ ಹೀಗಿದೆ ಎನ್ನುತ್ತ ತುಂಬ ಘನತನವಾಗಿ ಹೇಳುತ್ತಿದ್ದರು.

ಕೋದಂಡನು ಅಂಥವರೊಂದಿಗೆ ಒಂದೆರಡು ಪ್ರಶ್ನೆಗಳನ್ನು ಕೇಳಿ, ನಿಜ ತಿಳಿದುಕೊಂಡು ಮರ್ಯಾದೆಯಿಂದ ಹಿಂದಿರುಗಿಸಿಬಿಡುತ್ತಿದ್ದನು.

ಒಂದುಸಾರಿ ದೂರದ ಊರಿನಿಂದ ಸುಬ್ರಾಮಯ್ಯ ಎಂಬವನು ಬಂದು ಕೋದಂಡನೊಂದಿಗೆ, "ನನ್ನ ಮಗ ಎಲ್ಲಾ ವಿಧದಲ್ಲಿಯೂ ನಿಮ್ಮ ಮಗಳಿಗೆ ತಕ್ಕವನಾಗಿದ್ದಾನೆ. ಆಸ್ತಿವಿಷಯ ಕೇಳ್ತೀರಾ ? ಅದರಲ್ಲಿ ಹೆಚ್ಚು ಮಾತೇಕೆ ? ನಿಮಗಿರುವುದಕ್ಕಿಂತ ಒಂದು ಮೆಟ್ಟಿಲು ಹೆಚ್ಚೇ ಅಂದುಕೊಳ್ಳಿ !" ಎಂದನು.

ಕೋದಂಡನು ಮುಗುಳುನಗುತ್ತ "ಅದು ನಿಜ, ಹೆಚ್ಚು ಮಾತೇನೂ ಬೇಡಬಿಡಿ. ಒಂದೇ ಒಂದು ಸಣ್ಣ ಪ್ರಶ್ನೆ ಕೇಳುತ್ತೇನೆ. ಅಪಾರ್ಥಮಾಡಿಕೊಳ್ಳಬೇಡಿ. ನಿಮ್ಮ ಮನೆಯಲ್ಲಿ ಇಲಿಗಳು, ಬೆಕ್ಕುಗಳು, ನಾಯಿಗಳು ಇವೆಯೇನು ?" ಎಂದು ಕೇಳಿದನು.

ಸುಬ್ರಾಮಯ್ಯ ಅಸಹ್ಯಭಾವದಿಂದ—"ಛೀ ಛೀ ! ಅಂಥವೆಲ್ಲ ನಮ್ಮ ಮನೆಯಲ್ಲಿಲ್ಲವೇ ಇಲ್ಲ" ಎಂದನು.

"ಕ್ಷಮಿಸಿರಿ. ಈ ಸಂಬಂಧ ನನಗೆ ಇಷ್ಟವಿಲ್ಲ" ಎಂದನು ಕೋದಂಡ.

ಸುಬ್ರಾಮಯ್ಯ ಹೊರಟುಹೋದ ಮೇಲೆ, ಅವರ ಮಾತುಕತೆಗಳನ್ನು ಕೇಳುತ್ತಾ ಬಾಗಿಲ ಹಿಂದಿದ್ದ ಕೋದಂಡನ ಹೆಂಡತಿ ಹೊರಗೆ ಬಂದು ಗಂಡನೊಂದಿಗೆ, "ಮದುವೆಯ ಮಾತಿನಲ್ಲಿ ಇಲಿಗಳೂ, ಬೆಕ್ಕು ನಾಯಿಗಳೂ ಯಾಕೆ ಬಂದುವು ?" ಎಂದು ಕೇಳಿದಳು.

"ಧಾನ್ಯವಿರುವ ಕಡೆಯಲ್ಲಿ ಇಲಿಗಳೂ, ಹಸುಗಳಿರುವ ಮನೆಯಲ್ಲಿ ಬೆಕ್ಕುಗಳೂ ಇರುತ್ತವೆ. ಆಸ್ತಿವಂತನಾದವನು ಕಾವಲು ಕಾಯಲು ತಪ್ಪದೆ ನಾಯಿಯನ್ನೂ ಬೆಳೆಸುತ್ತಾನೆ. ಈಗ ಬಂದು ಹೋದವನಲ್ಲಿ ಇವು ಮೂರೂ ಇಲ್ಲ. ಅದರಿಂದ ತಿಳಿಯುವುದಿಲ್ಲವೇ, ಅವನ ಆಸ್ತಿಪಾಸ್ತಿಗಳೆಲ್ಲ ಎಷ್ಟರ ಮಟ್ಟಿನದೆಂದು ?" ಎಂದನು ಕೋದಂಡ ಮುಗುಳು ನಗುತ್ತಾ.





# ಕಾಲಕೇತನಗರ್ವ

ಒಂದಾನೊಂದು ಕಾಲದಲ್ಲಿ ಕಾಂಚನಪುರವೆಂಬ ರಾಜ್ಯವನ್ನು ಕಾಲಕೇತನೆಂಬ ರಾಜನು ಪಾಲಿಸಿ ಕೊಂಡಿದ್ದನು. ತಾನು ಎಲ್ಲರಹಾಗಿಲ್ಲದೆ, ರಾಜವಂಶ ದಲ್ಲಿ ಹುಟ್ಟಿದೆನೆಂದು ಚಿಕ್ಕಂದಿನಿಂದಲೇ ಗರ್ವಿಸಿ ಕೊಂಡಿದ್ದ ಅವನಲ್ಲಿ ರಾಜನಾದ ಮೇಲೆ, ಗರ್ವವು ಚೆನ್ನಾಗಿ ತಲೆಗೇರಿ ಬಿಟ್ಟಿತ್ತು. ತಾನು ಸರ್ವಶಕ್ತನೆಂದೂ, ತನ್ನನ್ನು ಹುಟ್ಟಿಸಿದ ಬ್ರಹ್ಮನು ಕೂಡಾ ತನ್ನ ತಂಟೆಗೆ ಬರಲು ಸಾಧ್ಯವಿಲ್ಲವೆಂದೂ ಭಾವಿಸಿಕೊಂಡಿದ್ದನು.

"ಸಿರಿಸಂಪದಗಳೆಂಬುದು ಯಾರಿಗೂ ಶಾಶ್ವತ ವಾದುವಲ್ಲ. ಇದನ್ನು ನಂಬಿ ಹೆಮ್ಮೆ ಪಡುವುದು ಕಡೆಗೆ ದುಃಖಕ್ಕೆ ಕಾರಣವಾದೀತು" ಎಂದು ಅವನ ಹಿತ ಚಿಂತಕರಾದವರು ಮೊದಲಿನಿಂದಲೂ ಹೇಳಿಕೊಂಡೇ ಬಂದಿದ್ದರು. ಅಧಿಕಾರದ ಗರ್ವದಲ್ಲಿರುವ ಕಾಲಕೇತನ ಕಿವಿಗಳಿಗೆ ಆ ಮಾತುಗಳಾವುದೂ ನಾಟಿರಲಿಲ್ಲ. ಚಿಕ್ಕವರು ದೊಡ್ಡವರು ಎಂಬ ತಾರತಮ್ಯಗಳೇನೂ ಇಲ್ಲದೆ ಎಲ್ಲರನ್ನೂ ಒಂದೇ ರೀತಿಯಾಗಿ ಹುಲ್ಲಿಗೆ ಸಮ ಭಾವಿಸಿದನ. ರಾಜಪದವಿಯಿಂದ ತನ್ನನ್ನು ತಪ್ಪಿಸಲಿಕ್ಕೆ ಯಾರಿಂದಲೂ ಸಾಧ್ಯವಿಲ್ಲವೆಂದು ಅವನ ಗಟ್ಟಿನಂಬಿಗೆ.

ಕಾಂಚನಪುರದ ರಾಜಧಾನೀ ನಗರದ ಪ್ರಶಸ್ತ ವಾದ ಪ್ರದೇಶದಲ್ಲಿ ಪ್ರಸಿದ್ಧವಾದೊಂದು ದೇವಾಲಯದಲ್ಲಿ ಪ್ರತಿವರ್ಷವೂ ಮಹಾವೈಭವದಿಂದ ಉತ್ಸವ ನಡೆಯುತ್ತಿದ್ದಿತು.

ಕಾಲಕೇತನು ಸಿಂಹಾಸನವೇರಿದ ಮೇಲೆ ದೇವಾಲಯದಲ್ಲಿ ಮೊದಲನೇ ಬಾರಿಯ ಉತ್ಸವವು ಬಂದಿತು. ಕಾಲಕೇತನು ಮಂತ್ರಿ ಸಾಮಂತಾದಿ ಗಳೊಂದಿಗೆ, ಆ ಉತ್ಸವ ನೋಡಲು ಹೊರಟನು.

ರಾಜನು ಅಲ್ಲಿಗೆ ಹೋಗಿ ಸೇರಿದಾಗ ಆಲಯ ದೊಳಗೆ ಪಂಡಿತರು ಪುರಾಣಪಠನೆ ಮಾಡುತ್ತಿದ್ದರು, ಅದನ್ನು ಪರಿಶೀಲಿಸಿ ಕಾಲಕೇತನು ಒಳಗಿನ ಪ್ರಾಕಾರಕ್ಕೆ ಪ್ರವೇಶಿಸಿದನು. ಅಲ್ಲಿ ಅರ್ಚಕರೂ ಪುರೋಹಿತರೂ ಸ್ವರಯುಕ್ತವಾಗಿ ಮಂತ್ರಗಳನ್ನೂ ಶ್ಲೋಕ ಗಳನ್ನೂ ಉಚ್ಚರಿಸಿಕೊಂಡಿದ್ದರು. ಒಂದೊಂದು ಉಚ್ಚಾರಕ್ಕೂ ದೇವರ ಮೇಲೆ ಹೂ ಬೀಳುತ್ತಿತ್ತು. ಅವರು ಹೇಳುವ ಒಂದು ಶ್ಲೋಕದ ಅರ್ಥವು ಈ ರೀತಿಯಾಗಿತ್ತು.

"ಭಗವಾನ್! ನೀನು ಸರ್ವಶಕ್ತನು. ನಿನಗಿಂತ ಹೆಚ್ಚಿನ ಶಕ್ತರು ಇನ್ನೊಬ್ಬರಿಲ್ಲ. ಸಂಕಲ್ಪ ಮಾತ್ರ

ದಿಂದಲೇ ಪ್ರಭುವನ್ನು ಸೇವಕನಾಗುವಂತೆಯೂ, ಸೇವಕನನ್ನು ಪ್ರಭುವಾಗುವಂತೆಯೂ ಮಾಡುವೆ."

ಈ ಶ್ಲೋಕವನ್ನು ಕೇಳುತ್ತಿದ್ದಂತೆ ಕಾಲಕೇತನ ಶರೀರದ ಮೇಲೆ ಹಾವು ಚೇಳುಗಳು ಹರಿದಾಡುವ ಹಾಗೆ ಅನಿಸಿತು. ಅದರ ಅರ್ಥವನ್ನು ತಿಳಿದು ಹಲ್ಲು ಕಡಿಯುತ್ತ, "ಬುದ್ಧಿಗೆ ನೊದ್ದು ಬಡೆದ ಕವಿಗಳು ಕಟ್ಟಿದ ಶ್ಲೋಕ. ದೇವನು ಸಂಕಲ್ಪಿಸುತ್ತಾನಂತೆ, ರಾಜನನ್ನು ಸೇವಕನಾಗಿ, ಸೇವಕನನ್ನು ರಾಜನಾಗಿ ಮಾಡಿಬಿಡುತ್ತಾನಂತೆ! ಹುಚ್ಚು ಪಂಡಿತರು! ಅರ್ಥವೇನಿಲ್ಲದ ಸುಮ್ಮನೆ ಹೊಗಳುವ ಶ್ಲೋಕಗಳು!" ಎಂದು ತನ್ನೊಳಗೇ ಹೇಳಿಕೊಂಡನು.

ಹಾಗೆ ಅವನು ಮಂತ್ರಾರ್ಥಗಳನ್ನು ನೆನೆಯುತ್ತಿದ್ದಂತೆ, ಕಣ್ಣಿನೊಳಗೆ ಏನೋ ಕವಿದುಕೊಂಡಂತಾಗಿ, ಆಕಳಿಸುತ್ತ ನಿದ್ರೆಯ ಮಯಕದಿಂದ ಕಣ್ಮುಚ್ಚಿದನು.

ಆ ಬಗೆಯ ಮತ್ತಿನಿಂದ ಎಚ್ಚರಕ್ಕೆ ಬಂದು ನೋಡಿದಾಗ ಅವನ ಸುತ್ತಲೂ ಕತ್ತಲೆಯೋ ಕತ್ತಲೆ! ತನ್ನೊಂದಿಗೆ ಬಂದ ಮಂತ್ರಿ ಸಾಮಂತ ಪರಿವಾರದವರು ಒಬ್ಬರೂ ಇರಲಿಲ್ಲ. ಎಲ್ಲಿಯೂ ಒಂದು ಸಣ್ಣ ದೀಪ ಉರಿಯುವುದೂ ಕಾಣಲಿಲ್ಲ. ಯಾವುದೋ ಕತ್ತಲೆ ಕೋಣೆಯಲ್ಲಿರುವಂತೆ ತೋರಿ ಗಾಬರಿಯಾದನು. ಮೈಯಲ್ಲಾ ಬೆವರ ತೊಡಗಿತು. ಗಂಟಲು ಒಣಗಿಕೊಂಡಿತು. ಆ ಕತ್ತಲೆಯಲ್ಲೇ ತಡವುತ್ತಾ ಹೋಗಿ, ಬಾಗಿಲು ಇರುವ ಸ್ಥಳವನ್ನು ತಿಳಿದನು. ದಬದಬನೆ ಬಾಗಿಲನ್ನು ಬಡೆಯುತ್ತ, "ಯಾರ್ರೋ ಅಲ್ಲೀ! ತೆಗೀರೋ ಬಾಗಿಲು! ನಾನು ರಾಜ ಕರೆಯುತ್ತಿದ್ದೇನೆ! ಕಾಲಕೇತ ಮಹಾರಾಜ! ಬೇಗ ಬಾಗಿಲು ತೆರೀತೀರೋ ಇಲ್ವೋ?" ಎಂದು ತನ್ನ ಕಿವಿಗಳಿಗೇ ಪ್ರತಿಧ್ವನಿ ಬಡೆಯುವ ಹಾಗೆ ಗಂಟಲು ಹರಿದುಕೊಂಡು ಕೂಗಿದನು.

ಅವನ ಕೂಗು ಆಲಯದೊಳಗಿನಿಂದಲೇ ಬರುತ್ತಿದ್ದಿತು. ದೇವಾಲಯದಾಚೆಗೆ ಕಾವಲಗಾರರಿದ್ದರು, ಅವರಿಗೆ ದೇವಾಲಯದೊಳಗಿನಿಂದ ಬರುವ ಕೂಗು ಕೇಳಿ ಆಶ್ಚರ್ಯವಾಯಿತು. "ಈಗ ತಾನೇ ಮಹಾರಾಜರು ಪೂಜಾ ನಮಸ್ಕಾರಗಳನ್ನೆಲ್ಲ ಮುಗಿಸಿ ಅರಮನೆಗೆ ಹೊರಟುಹೋದರು? ಎಲ್ಲಾ ಮುಗಿದು ಅರ್ಚಕರು ದೇವಾಲಯದ ಬಾಗಿಲು ಕೂಡಾ ಹಾಕಿಯಾಯಿತು! ಇದೇನಿದು? ತಾನು ರಾಜ, ಕಾಲಕೇತ ರಾಜ ಎಂದು ಕೂಗುವವನು ಯಾರು? ಯಾವನಾದರೂ ಹುಚ್ಚ ಒಳಗೆ ಸೇರಿಕೊಂಡಿದ್ದಾನೋ? ಕುಡಿದು ಬೋದತಪ್ಪಿ ಯಾವ ಮೂಲೆಯಲ್ಲಾದರೂ ಬಿದ್ದಿದ್ದನೋ?" ಎಂದು ಮುಂತಾಗಿ ವಾದಮಾಡಿಕೊಳ್ಳತೊಡಗಿದರು.



ಕಾವಲುಗಾರರು ಆಲಯದ ಬಾಗಿಲು ತೆರೆದುದೇ ತಡ, ಮಿಂಚಿನ ವೇಗದಿಂದ ಅವರ ನಡುವೆ ತೂರಿಕೊಂಡು ಯಾವನೋ ಓಡಿಹೋದುದನ್ನು ಅವರು ಗಮನಿಸುವುದರೊಳಗೇ, ಅವನು ದೂಡಿದ ವೇಗಕ್ಕೆ ಬಾಗಿಲು ತೆರೆದವರು ಬಿದ್ದುಬಿಟ್ಟಿದ್ದರು.



ಹುಚ್ಚನ ಹಾಗೆ ಓಡುತ್ತಾ ದೇವಾಲಯದಿಂದ ಹೊರಬಿದ್ದ ಕಾಲಕೇತನು ನೆಟ್ಟಗೆ ರಾಜಭವನಕ್ಕೆ ಹೋಗಿ, "ಯಾರಲ್ಲಿ? ಏನಿದು ಅವಿಧೇಯತೆ? ನಾನು ಆಲಯದೊಳಗೆ ನಿದ್ದೆಯಲ್ಲಿರುವಾಗ, ನನ್ನನ್ನು ಅಲಕ್ಷ್ಯವಾಗಿ ಬಿಟ್ಟು ಮಂತ್ರಿ ಮುಂತಾದವರು ಹೇಗೆ ಬಂದರು? ಅಷ್ಟು ಧೈರ್ಯ ಹೇಗೆಬಂತು? ಎಲೋ! ಯಾರಲ್ಲೀ? ಈ ಅವಿಧೇಯರನ್ನೆಲ್ಲಾ ಹಿಡಿದು ಬಂಧಿಸಿರಿ!" ಎಂದು ಅತ್ತಿತ್ತ ನೋಡುತ್ತಾ ಆಜ್ಞೆ ಮಾಡಿದನು.

"ಏನು ನೋಡುತ್ತೀರಿ? ಯಾರು ಈ ಹುಚ್ಚ! ಬಂಧಿಸಿರಿ ಇವನನ್ನು! ಯಾರು ಇವನನ್ನು ಇತ್ತಬರಲು ಬಿಟ್ಟವರು?" ಎಂದು ಸೇನಾನಾಯಕನು ಭಟರಿಗೆ ಆಜ್ಞೆ ಮಾಡಿದನು. ಆ ಕೂಡಲೇ ಭಟರು ಓಡಿ ಬಂದು ಕಾಲಕೇತನ ಕೈಗಳಿಗೆ ಸಂಕಲೆ ತಗಲಿಸಿ, ಎಳೆದೊಯ್ದು ರಾಜನ ಮುಂದೆ ನಿಲ್ಲಿಸಿದರು. ಕಾಲಕೇತ ರಾಜನ ರೂಪದಲ್ಲಿ ಸಿಂಹಾಸನದ ಮೇಲಿರುವ ದೇವದೂತನು ರಾಜನನ್ನು ನೋಡಿ ಮಂದಹಾಸದಿಂದ "ಯಾರೋ ನೀನು?" ಎಂದು ಕೇಳಿದನು.

"ನಾನೋ? ನನ್ನನ್ನು ಯಾರು ಎಂದು ಕೇಳುವೆಯಾ?" ಎಂದು ಕಾಲಕೇತನು ಹುಂಕಾರ ಮಾಡಿದನು. "ಕಾಲಕೇತ ಮಹಾರಾಜನು ನಾನು! ಏಯ್! ಬುದ್ಧಿಗೇಡಿ ಭಟರೇ! ಇವನಾವನೋ ನನ್ನ ವೇಷ ಹಾಕಿಕೊಂಡು ಬಂದಿದ್ದಾನೆ! ಮೊದಲು ಅವನನ್ನು ಬಂಧಿಸಿರಿ!" ಎಂದು ಭಟರ ಮೇಲೆ ಹಾರಿ ಹಾರಿ ಬಿದ್ದನು ಕಾಲಕೇತರಾಜ.

ಮಾರುವೇಷದಲ್ಲಿ ಸಿಂಹಾಸನವೇರಿದ್ದ ದೇವದೂತನಿಗೆ ಕಾಲಕೇತನಲ್ಲಿ ಅತಿಶಯಿಸಿಕೊಂಡಿರುವ ಅಹಂಕಾರವನ್ನು ನೋಡಿ ನಗು ಬಂದಿತು.

"ಪಾಪ! ವಿಪರೀತ ಕುಡಿದು ತಲೆ ಕೆಟ್ಟವನು. ಸ್ವಲ್ಪ ಸರಿಯಾದ ಮೇಲೆ ನಮ್ಮ ಆಸ್ಥಾನದಲ್ಲಿ ಹಾಸ್ಯಗಾರನಾಗಿ ಇರಿಸಿಕೊಳ್ಳಬಹುದು. ಯಾವುದಕ್ಕೂ ಮತ್ತು ಇಳಿಯುವವರೆಗೆ ಸೆರೆಮನೆಯಲ್ಲಿ ಇರಿಸಿರಿ" ಎಂದನು ಕಾಲಕೇತರೂಪದ ದೇವದೂತ.

ಕೂಡಲೇ ಭಟರು ಕಾಲಕೇತನನ್ನು ಎಳೆದುಕೊಂಡು ಹೋಗಿ ಸೆರೆಮನೆಯ ಕತ್ತಲೆಯೊಳಗೆ ತಳ್ಳಿ, ಬಾಗಿಲು ಹಾಕಿ ಬಿಟ್ಟರು. ಅವನು, "ನನ್ನನ್ನು ಯಾರೆಂದು ಕೊಂಡಿರಿ! ಮಹಾರಾಜ ನಾನು! ನನಗೆ ಹೀಗೆ ಮಾಡಿದುದರ ಫಲ ನಿಮಗೆ ಖಂಡಿತಾ ಸಿಕ್ಕುತ್ತದೆ. ಎಂದಿಗೂ ಬಿಡಲಾರೆ!" ಎಂದು ಹೇಳುತ್ತಲೇ ಇದ್ದ ಕಾಲಕೇತನನ್ನು ನೋಡಿ ಭಟರೆಲ್ಲಾ ಗಹಗಹಿಸಿ ನಗುತ್ತಿದ್ದರು.

ಕೆಲವು ದಿನಗಳು ಕಳೆದುವು. ರಾಜನ ರೂಪದ ದೇವದೂತನು ರಾಜಭವನದಲ್ಲಿ ಬ್ರಹ್ಮಾಂಡವಾದೊಂದು ಔತಣವನ್ನು ಏರ್ಪಡಿಸಿದನು. ಒಂದು ಹೊಸ ದೃಶ್ಯವನ್ನು ತೋರಿಸಲಿಕ್ಕಾಗಿಯೇ ಔತಣದ ಏರ್ಪಾಡು ಎನ್ನಲಾಗಿತ್ತು. ಅನೇಕ ಸಾಮಂತ

ರಾಜರನ್ನೆಲ್ಲಾ ಔತಣಕ್ಕೆ ಆಮಂತ್ರಿಸಲಾಗಿತ್ತು. ಎಲ್ಲರೂ ಸೇರಿದ ದರ್ಬಾರು ಮಂಟಪವು ವೈಭವದಿಂದ ಮೆರೆದುಕೊಂಡಿದ್ದಿತು.

ಹೀಗೆ ಎಲ್ಲರೂ ಸಮಾವೇಶರಾಗಿದ್ದ ಮಹಾಸಭೆಗೆ ಕಾಲಕೇತನನ್ನು ಕರೆದು ತರುವಂತೆ ದೇವದೂತ ರಾಜನು ಆಜ್ಞಾಪಿಸಿದನು. ಅನೇಕ ಬಣ್ಣಗಳ ಬಟ್ಟೆಯ ಚೂರುಗಳಿಂದಾದ ದುಸ್ತುಗಳನ್ನು ಕಾಲಕೇತನಿಗೆ ತೊಡಿಸಲಾಗಿತ್ತು. ತಲೆಯ ಮೇಲೆ ಹಾಸ್ಯಗಾರನು ಧರಿಸಿಕೊಳ್ಳುವ ಉದ್ದವಾದ ಕುಚ್ಚು ಟೋಪಿಯನ್ನು ಇರಿಸಲಾಗಿತ್ತು.

ಕೈಯಲ್ಲಿ ಮಾರುದ್ದವಿರುವ ಅಂಕುಡೊಂಕಾದ ಕೋಲು. ಹೆಗಲಿನ ಮೇಲೆ ಕಿಚಕಿಚವೆನ್ನುತ್ತಿರುವ ಕೋತಿಯಮರಿಯೊಂದು.

ಭಟರ ನಡುವೆ ಇಂತಹ ವೇಷದ ಕಾಲಕೇತನನ್ನು ತಂದು ಸಭೆಯ ಮಧ್ಯದಲ್ಲಿ ನಿಲ್ಲಿಸಲಾಯಿತು. ಅಷ್ಟು ಹೊತ್ತಿಗೆ ಅವನ ಬುದ್ಧಿ ಮಂಕಾಗಿ, ಸುಮ್ಮನೆ ಪಿಳಿಪಿಳಿ ನೋಡುತ್ತಿದ್ದನು.

"ಇವನು ಯಾರೆಂದು ನಿಮಗೆ ಗೊತ್ತೋ?" ಎಂದು ದೇವದೂತ ರಾಜನು ಸಭೆಯವರನ್ನು ಕೇಳಿದನು. ಅದನ್ನು ಕೇಳಿ ಕಾಲಕೇತನಿಗೆ ಬಹಳ ಕೋಪ ಬಂದು, ಹಲ್ಲು ಕಡಿಯುತ್ತ, ಸಭೆಯಲ್ಲಿದ್ದ ಸಾಮಂತಾದಿಗಳನ್ನು ನೋಡಿ, "ಏನು ಹಾಗೆ ನೋಡುವಿರಿ? ನಿಜವಾದ ಕಾಲಕೇತ ಮಹಾರಾಜನು ನಾನೇ. ಇವನು ಯಾವನೋ ಮೋಸಗಾರ! ನನ್ನ ವೇಷ ಹಾಕಿಕೊಂಡು ಬಂದು ನಿಮಗೆಲ್ಲಾ ಮೋಸ ಮಾಡುತ್ತಿದ್ದಾನೆ!" ಎಂದನು.

ಸಭೆಯಲ್ಲಿದ್ದವರೆಲ್ಲಾ ಗೊಳ್ಳನೆ ನಕ್ಕರು. "ಆಹಾ! ಹೀಗೆ ಹೇಳಬೇಕಾದರೆ ಇವನಿಗೆಷ್ಟು ಧೈರ್ಯ! ಮಾತೂ ವೇಷವೂ ತುಂಬ ಚೆನ್ನಾಗಿದೆ!" ಎಂದು ಸಭೆಯಲ್ಲಿದ್ದ ಕೆಲವರು ಹೇಳಿದರು.

"ಸರಿ. ಇನ್ನೂ ಕೆಲವು ದಿನ ಸೆರೆಮನೆಯಲ್ಲಿದ್ದು ತಲೆತಣ್ಣಗಾಗಲಿ! ಆಮೇಲೆ ಇವನನ್ನು ಆಸ್ಥಾನದ ಹಾಸ್ಯ ಚಕ್ರವರ್ತಿಯಾಗಿ ಇರಿಸಬೇಕೆಂದಿದ್ದೇನೆ. ಇವನ ಪರಿಚಯ ನಿಮಗಾಗಲೆಂದೇ ಈ ದಿನ ಸಭೆ



ಸೇರಿಸಿದ್ದು!" ಎಂದನು ದೇವದೂತ ರಾಜ. ಆಮೇಲೆ ಸಭೆ ಮುಗಿಯಿತು. ಕಾಲಕೇತನನ್ನು ಅಂತಃಪುರದವರಿಗೂ ಪರಿಚಯ ಮಾಡಿಕೊಡ ಬೇಕೆಂದು, ದೇವದೂತರಾಜನು, ಕಾಲಕೇತನನ್ನು ತನ್ನ ಹಿಂದೆಯೇ ಅಂತಃಪುರಕ್ಕೆ ಕರೆಯಿಸಿಕೊಂಡು ಹೋದನು.

ಅಂತಃಪುರದ ಕೊಟಡಿಯಲ್ಲಿ ದೇವದೂತ ರಾಜನು ಕಾಲಕೇತನನ್ನು ತನ್ನಿದುರು ನಿಲ್ಲಿಸಿಕೊಂಡು, ಭಟರನ್ನು ಕಳುಹಿಸಿ ಬಾಗಿಲು ಭದ್ರಪಡಿಸಿಕೊಂಡನು.

"ಈಗ ಹೇಳು. ನೀನು ಯಾರು, ನಾನು ಯಾರೆಂಬುದು ಸರಿಯಾಗಿ ಗೊತ್ತಾಯಿತೆ?" ಎಂದು ದೇವದೂತ ರಾಜನು ಕಾಲಕೇತನ ಮುಖವನ್ನೇ ನೋಡಿದನು.

ಆ ನೋಟವು ಕಿರಣಗಳ ಹಾಗೆ ಕಾಲಕೇತನ ಮನಸ್ಸಿನೊಳಗೇ ಪಸರಿಸಲು, ಆವನು ಆಗ ತಾನೇ ದುಸ್ವಪ್ನದ ನಿದ್ದೆಯಿಂದ ಎಚ್ಚರಕ್ಕೆ ಬಂದವನಂತೆ, ವಿನಯದಿಂದ ಕೈಜೋಡಿಸಿ, "ದೇವಾ! ನಾನು ನಿಜವಾಗಿಯೂ ಹುಚ್ಚನು! ಗರ್ವದಿಂದ ಹುಚ್ಚ ನಾದವನು. ಮಾನವಬಲ ದೈವಬಲವೆರಡನ್ನೂ ಧಿಕ್ಕರಿಸಿದ ಅಹಂಕಾರ ತುಂಬಿದವನು. ಬುದ್ಧಿಗೇಡಿ! ದೈವವು ತಿರುಗಿದರೆ ನನ್ನ ಪ್ರಜೆಗಳೇ ನನ್ನನ್ನು ಗುರುತಿಸದಂತಾಗುವುದೆಂದು ಈಗ ಗೊತ್ತಾಯಿತು. ನಾನು ನಿಮ್ಮಿಂದ ನಿಯಮಿಸಲ್ಪಟ್ಟ ಪ್ರಜಾಕಿಂಕರನೇ ಹೊರತು, ಹೆಚ್ಚಿನವನಲ್ಲವೆಂದು ಬುದ್ಧಿ ಕಲಿಸಿರುವಿ ದೇವಾ! ಕ್ಷಮಿಸು! ನಿನಗೂ ಪ್ರಜೆಗಳಿಗೂ ದಾಸ ನಾಗಿಯೇ ಇರುತ್ತೇನೆ" ಎಂದು ಕಣ್ಣೀರುಗರೆಯುತ್ತಾ ಹೇಳಿದನು.

ದೇವದೂತನು ತೃಪ್ತಿಯಿಂದ ಎರಡು ಕೈಗ ಳಿಂದಲೂ ಕಾಲಕೇತನನ್ನು ತಡವಿ ಆಶೀರ್ವದಿಸುತ್ತ, "ಈಗ ನೀನು ನಿಜವಾಗಿಯೂ ಕಾಲಕೇತರಾಜನು! ಸುಖವಾಗಿರು" ಎಂದು ಹೇಳಿ ಮಾಯವಾಗಿ ಹೋದನು.

ಕಾಲಕೇತನ ಬಣ್ಣ ಬಣ್ಣಗಳ ದುಸ್ತುಗಳೂ, ಕುಚ್ಚು ಟೋಪಿಯೂ ಮಾಯವಾಗಿದ್ದುವು. ಮಾಮೂಲು ಕಾಲಕೇತನಾಗಿಯೇ ಇದ್ದನು. ಯಾರೂ ಆ ಹುಚ್ಚ ನನ್ನು ಕುರಿತು ಚಕಾರವೆತ್ತಲಿಲ್ಲ. ಎಲ್ಲಾ ದೊಡ್ಡ ದೊಂದು ಕನಸಿನಂತೆ ನಡೆದಿತ್ತು.

ಕಾಲಕೇತರಾಜನು ದೇವಾಲಯದಲ್ಲಿ ವಿಶೇಷ ವಾದೊಂದು ಪೂಜೆಯನ್ನೂ, ಉತ್ಸವವನ್ನೂ ನಡೆಸಿ ಅರ್ಚಕರೂ, ಪುರೋಹಿತರೂ ಹೇಳುವ ಶ್ಲೋಕ ಮಂತ್ರಗಳನ್ನು ಕೇಳುತ್ತಾ ಆನಂದ ಪರವಶನಾದನು. ರಾಜನು ಹೊಸಗುಣಗಳಿಂದ ಒಳ್ಳೊಳ್ಳೆಯ ಪ್ರಜಾ ಪಾಲಕ ಪಥಕಗಳನ್ನು ಹಾಕಿ ಎಲ್ಲರಿಗೂ ಪ್ರಿಯನಾಗಿ ಒಳ್ಳೆಯ ಹೆಸರು ಪಡೆದನು.






# ಕೋಶಾಧಿಕಾರ

**ಹಿಂದೆ** ಅಮರಪುರವೆಂಬ ರಾಜ್ಯವನ್ನು ವಿಜಯಸೇನನೆಂಬ ರಾಜನು ಪಾಲಿಸುತ್ತಿದ್ದನು. ಆವನ ತಂದೆಯ ಕಾಲದಲ್ಲಿ ಕೋಶಾಧಿಕಾರದಲ್ಲಿದ್ದವರು ಪ್ರಾಮಾಣಿಕರಾಗಿರುವುದಿಲ್ಲವೆಂದು ಗೊತ್ತಾದುದರಿಂದ, ಆ ಪದವಿಗೆ ಯಾರನ್ನೂ ನಿಯಮಿಸದೆ, ರಾಜನೇ ಕೋಶಾಧಿಕಾರವನ್ನೂ ವಹಿಸಿಕೊಂಡು ನಿರ್ವಹಿಸುತ್ತಿದ್ದನು.

ಹೀಗೆ ಅವನ ತಂದೆಯ ಕಾಲದಲ್ಲಿ ಈ ಸಂಪ್ರದಾಯ ಪ್ರಾರಂಭವಾಗಿತ್ತು. ಆದುದರಿಂದ ರಾಜನಿಗೆ ಯಾವಾಗಲೂ ಕೆಲಸ ಜಾಸ್ತಿ, ವಿಶ್ರಾಂತಿ ಕಡಿಮೆ. ಅದೂ ಅಲ್ಲದೆ ರಾಜ್ಯಪಾಲನೆಗೆ ಸಂಬಂಧಿಸಿದ ಬೇರೆ ಬೇರೆ ಬಾಧ್ಯತೆಗಳೂ ಹೆಚ್ಚಾದುವು. ಆದುದರಿಂದ ಕೋಶಾಧಿಕಾರಕ್ಕೆ ಯಾವನಾದರೊಬ್ಬ ನಂಬಿಗಸ್ಥನನ್ನು ನಿಯಮಿಸಬೇಕಾದುದು ಆಗತ್ಯವೆಂದು ವಿಜಯಸೇನನಿಗೆ ಅನಿಸತೊಡಗಿತು.

ಕಡೆಗೆ ಒಂದುದಿನ ರಾಜನು ಮಂತ್ರಿ ಸುಗುಣಗುಪ್ತನೊಂದಿಗೆ "ಇತ್ತೀಚೆಗೆ ನನಗೆ ಸ್ವಲ್ಪವೂ ವಿಶ್ರಾಂತಿ ಇಲ್ಲದೆ ಹೋದುದರಿಂದ, ಕೋಶಾಗಾರದ ಲೆಕ್ಕಗಳೆಲ್ಲ ಆಗಾಗಲೇ ಮುಗಿಸಲಾಗದೆ ಉಳಿಯುತ್ತಾ ಹೋಗುತ್ತಿವೆ. ಆದರಿಂದ ಬಹಳ ತೊಂದರೆಯಾಗಿದೆ. ಯಾರಾದರೂ ನಂಬುಗೆಯವನಾಗಿ, ಸಮರ್ಥನಾಗಿ ಇರುವವನು ದೊರೆತರೆ ಕೋಶಾಧಿಪತಿಯಾಗಿ ನಿಯಮಿಸಿದರೆ ಒಳ್ಳೆಯದೆಂದು ಕಾಣುತ್ತದೆ. ನಿಮ್ಮ ಅಭಿಪ್ರಾಯವೇನು ?" ಎಂದು ಕೇಳಿದನು.

ರಾಜನ ನಿರ್ಣಯವು ಮಂತ್ರಿಗೂ ಸಮಂಜಸವೆನಿಸಿತು. "ನಿಜವೇ ಪ್ರಭೂ. ಕೋಶಾಗಾರದ ಲೆಕ್ಕಗಳು ಆಯಾ ದಿನದ್ದು ಆಯಾ ದಿನಕ್ಕೇ ಮುಗಿಯಬೇಕು. ಉಳಿದು ಹೋದರೆ ತೊಂದರೆಯೇ ಬರುತ್ತದೆ. ಇಲ್ಲಿ ನಾವು ನಿಮ್ಮ ತಂದೆಯ ಅನುಭವವನ್ನು ನೆನಪಿಟ್ಟುಕೊಳ್ಳಬೇಕು. ಹೆಚ್ಚಾಗಿ ಧನಾಗಾರದ ಆ ಕೆಲಸವು ಒಳ್ಳೆಯವರಿಗೂ ಕೆಟ್ಟ ಬುದ್ಧಿ ಬರಿಸುವಂತಹುದು. ಸ್ವಾರ್ಥಕ್ಕೆ ವಶನಾಗದ ಗಟ್ಟಿ ಮನಸ್ಸಿನವನೇ ಅದಕ್ಕೆ ತಕ್ಕವನು." ಎಂದನು ಮಂತ್ರಿ.

"ನಾನೂ ಅದನ್ನೇ ಹೇಳುತ್ತೇನೆ. ಯಾವನೋ ಮುಖಮೂಗು ತಿಳಿಯದವನು ಪ್ರಯೋಜನವಿಲ್ಲ. ರಾಜಭವನದಲ್ಲಿ ಉದ್ಯೋಗಸ್ಥರಾಗಿರುವರಲ್ಲಿ ಒಬ್ಬನನ್ನು ಆ ಪದವಿಗೆ ಆರಿಸುವುದೇ ಒಳ್ಳೆಯದು. ಏನನ್ನುವಿರಿ ?" ಎಂದನು ರಾಜ.

ರಾಂಬಾಬು

ಮಂತ್ರಿ ಅದಕ್ಕೆ ಒಪ್ಪಿಕೊಂಡು ಕೋಶಾಧಿಕಾರ ಪದವಿಯನ್ನು ಕುರಿತು ಒಂದು ಪ್ರಕಟನೆ ತಯಾರು ಮಾಡಿ, ಇಷ್ಟವಿದ್ದವರು ಮನವಿ ಕಳುಹಿಸಬೇಕೆಂದು, ಎಲ್ಲಾ ಉದ್ಯೋಗಸ್ಥರಿಗೂ ಕಳುಹಿಸಿದನು. ಅದನ್ನು ನೋಡಿದ ಉದ್ಯೋಗಸ್ಥರಲ್ಲಿ ಯಾರೋ ಒಬ್ಬಿಬ್ಬರ ಹೊರತು ಎಲ್ಲರೂ ತಾವು ಆ ಪದವಿಯನ್ನು ನಿರ್ವಹಿಸಬಲ್ಲೆವೆಂದು ಮನವಿಗಳನ್ನು ಕಳುಹಿಸಿದರು. ಮಂತ್ರಿ ಅವುಗಳನ್ನು ತೆಗೆದುಕೊಂಡು ರಾಜನ ಬಳಿಗೆ ಹೋದನು.

ರಾಜನು ಅವುಗಳನ್ನೆಲ್ಲಾ ನೋಡಿ, ಅನಂತಶರ್ಮನೆಂಬವನಿಗೆ ಉಳಿದೆಲ್ಲರಿಗಿಂತ ಹೆಚ್ಚಿಗೆ ಅನುಭವದ ಯೋಗ್ಯತೆ ಇರುವುದನ್ನು ಗಮನಿಸಿ,ಮಂತ್ರಿಯೊಂದಿಗೆ, " ಈ ಅನಂತಶರ್ಮ ಕೋಶಾಧಿಕಾರ ಪದವಿಗೆ ತಕ್ಕವನಂತಿದ್ದಾನೆ " ಎಂದನು.

" ಮಹಾಪ್ರಭೂ, ಮನವಿ ಕಳುಹಿಸಿದವರಾರನ್ನೂ ನಿಯಮಿಸುವುದು ಒಳ್ಳೆಯದಲ್ಲ. ಇವರೆಲ್ಲಾ ಆ ಪದವಿಯನ್ನು ಸ್ವಂತ ಲಾಭಕ್ಕಾಗಿ ಉಪಯೋಗಿಸಿಕೊಳ್ಳುವವರೇ. ರಾಜಭವನದ ಉದ್ಯೋಗಸ್ಥರೆಲ್ಲರೂ ಮನವಿ ಕಳಿಸಿರುವುದೇನೋ ನಿಜ. ಅಂಥವರೆಲ್ಲ ಕೆಟ್ಟವರೆಂದು ಅರ್ಥವಲ್ಲ. ಮುಖ್ಯವಾದ ಒಬ್ಬನು ಮಾತ್ರ ಮನವಿ ಕಳುಹಿಸಲಿಲ್ಲ. ಕಳುಹಿಸದೆ ಸುಮ್ಮನಿರುವವನು ಜ್ಞಾನವರ್ಮನೊಬ್ಬನೇ. ಅವನು ತುಂಬಾ ಪ್ರಾಮಾಣಿಕನಾದವನೆಂದು ನನಗೆ ನಂಬುಗೆಯಿದೆ. ಕೋಶಾಧಿಕಾರ ಪದವಿಗೆ ಜ್ಞಾನವರ್ಮನೇ ತಕ್ಕವನು " ಎಂದನು ಮಂತ್ರಿ.

ರಾಜನು ಮಂತ್ರಿಯ ಮಾತು ಕೇಳಿ ಆಶ್ಚರ್ಯಪಡುತ್ತ, " ಹಾಗಿದ್ದರೆ ಹೀಗೆ ಮನವಿ ಬರೆದು ಕಳುಹಿಸಬೇಕೆಂದು ಪ್ರಕಟನೆ ಕೊಡುವ ಅಗತ್ಯವೇನಿತ್ತು ? " ಎಂದು ಕೇಳಿದನು.

" ಮಹಾರಾಜಾ, ಉದ್ಯೋಗಸ್ಥರಿಗೆಲ್ಲ ನಾನು ಕಳುಹಿಸಿದ ಪ್ರಕಟನೆಯಲ್ಲಿ ಕೋಶಾಧಿಕಾರ ಪದವಿಗೆ, ಪ್ರಸ್ತುತ ಅವರು ತೆಗೆದುಕೊಳ್ಳುವ ಸಂಬಳಕ್ಕಿಂತ ಹೆಚ್ಚಿಗೆ ಸಿಗಲಾರದೆಂದು ಸೂಚಿಸಿದ್ದೆನು. ಆದರೂ ಆ ಪದವಿಗೆ ಇಷ್ಟು ಮಂದಿ ಬರೆದುಕೊಂಡಿದ್ದಾರೆಂದರೆ ಅವರ ದುರುದ್ದೇಶವು ಗೊತ್ತಾಗುತ್ತದೆ. ಜ್ಞಾನವರ್ಮನೊಬ್ಬನೇ ಈ ಪದವಿಗೆ ಮನವಿ ಬರೆದುಕೊಳ್ಳಲಿಲ್ಲ." ಎಂದನು ಮಂತ್ರಿ.

ರಾಜನು ಒಪ್ಪಿ ತಲೆದೂಗಿ, ಮಂತ್ರಿಯ ಸೂಕ್ಷ್ಮಬುದ್ಧಿಯನ್ನು ಮೆಚ್ಚಿದನು. ಅವನು ಮರುದಿನ ಜ್ಞಾನವರ್ಮನನ್ನು ಕರೆಯಿಸಿ, ಪ್ರಕಟನೆಯಲ್ಲಿ ಸೂಚಿಸಿದಂತೆ ಅಲ್ಲದೆ, ಹೆಚ್ಚಿನ ವೇತನ, ಅಂದರೆ ತಿಂಗಳಿಗೆ ಸಾವಿರ ವರಹದಂತೆ ನಿರ್ಣಯಿಸಿ, ಕೋಶಾಧಿಕಾರ ಪದವಿಗೆ ಅವನನ್ನೇ ನಿಯಮಿಸಿದನು. ಇದನ್ನು ನೋಡಿ ಎಲ್ಲರೂ ಬೆರಳು ಕಚ್ಚಿಕೊಂಡರು.





# ವಿಘ್ನೇಶ್ವರ

ವಾತಾಪಿಯನ್ನು ಜೀರ್ಣಿಸಿ ರಾಕ್ಷಸ ಪೀಡೆಯನ್ನು ನಿವಾರಿಸಿದ ಮೇಲೆ, ಅಗಸ್ತ್ಯನ ಮನಸ್ಸಿನಲ್ಲಿ, ವಾತಾಪಿನಗರದ ಮಧ್ಯದಲ್ಲಿರುವ ಮಹಾಶಿಲೆಯನ್ನು ವಿಘ್ನೇಶ್ವರ ಶಿಲ್ಪವಾಗಿ ರೂಪಿಸಬೇಕೆಂಬ ಬಯಕೆ ಹಾಗೆಯೇ ಉಳಿದಿತ್ತು. ಚಿತ್ರಕಲೆಯಲ್ಲಿ ಪ್ರವೀಣೆಯಾದ ಲೋಪಾಮುದ್ರೆ ಅಲ್ಲಿಗೆ ಬಂದು ಆ ಮಹಾಶಿಲೆಯನ್ನು ಪರಿಶೀಲಿಸಿ, ಅದು ಯಾವ ವಿಧವಾಗಿ ರೂಪಪಡೆದರೆ ಚೆನ್ನಾಗಿರುವುದೆಂದು ಕಲ್ಪಿಸಿಕೊಂಡು ವಿಘ್ನೇಶ್ವರನ ಒಂದು ರೇಖಾ ಚಿತ್ರವನ್ನು ತಯಾರಿಸಿದಳು. ಅದರಲ್ಲಿ ದೆಘ್ನೇಶ್ವರನ ಮಹೋನ್ನತತ್ವವೂ, ಮಹಿಮೆಗಳೂ ಅಡಗಿಕೊಂಡು ಅತ್ಯದ್ಭುತವಾಗಿದ್ದಿತು.

ಅದನ್ನು ನೋಡಿದ ಮೇಲೆ ಅಗಸ್ತ್ಯನ ಬಯಕೆ ಇನ್ನಷ್ಟು ಆತುರಗೊಂಡು ಮೇಲೆದ್ದಿತು. ಆ ಚಿತ್ರದ ಹಾಗೆ ಮಹಾಶಿಲೆಯನ್ನು ಶಿಲ್ಪವಾಗಿ ಕೆತ್ತುವಂತಹ ಶಿಷ್ಯ ಶಿಲ್ಪಿಗಳನ್ನು ಕೂಡಿದ ಆಚಾರ್ಯ ಶಿಲ್ಪಿಯನ್ನು ಹುಡುಕ ತೊಡಗಿದನು. ಎಷ್ಟು ಪ್ರಯತ್ನಿಸಿದರೂ ಅಂತಹ ಶಿಲ್ಪಿ ಲಭಿಸಲಿಲ್ಲ. ಅಗಸ್ತ್ಯನು ಚಿಂತಾಕ್ರಾಂತನಾಗಿ ಆ ಮಹಾಶಿಲೆಯ ಇದಿರಿನಲ್ಲಿ ಕುಳಿತುಕೊಂಡು ಲೋಪಾಮುದ್ರೆ ಬರೆದ ಚಿತ್ರಪಟವನ್ನೂ ಶಿಲೆಯನ್ನೂ ಪದೇ ಪದೇ ನೋಡಿಕೊಳ್ಳುತ್ತ ಕಾಲ ಕಳೆಯುತ್ತಿದ್ದನು. ಆ ರೇಖಾ ಚಿತ್ರವನ್ನು ಶಿಲ್ಪವಾಗಿ ನೋಡುವ ಭಾಗ್ಯ ತನಗಿಲ್ಲವೇನೋ ಎಂಬ ಚಿಂತೆಯಿಂದ ಬೇಯತೊಡಗಿದನು.

ಅವನ ಕೋರಿಕೆಯನ್ನು ತಿಳಿದು ಬಂದ ಶಿಲ್ಪಾಚಾರ್ಯರೆಲ್ಲರೂ, ರೇಖಾ ಚಿತ್ರವನ್ನು ನೋಡಿ, "ಇಂತಹ ಶಿಲ್ಪವನ್ನು ಕೆತ್ತುವುದು ದೇವಶಿಲ್ಪಿ ವಿಶ್ವಕರ್ಮನೋ, ದಾನವ ಶಿಲ್ಪಿಮಯನೋ ಹೊರತು ಕೇವಲ ಮಾನವ ಶಿಲ್ಪಿಗಳಿಂದ ಸಾಧವಾಗಲಾರದು. ಇದಕ್ಕೆ ಬೇಕಾದ ಉಳಿಗಳೂ, ಚಾಣಗಳೂ, ತಕ್ಕ ಸುತ್ತಿಗೆಗಳೂ ಭೂಮಿಯಲ್ಲಿಲ್ಲ." ಎಂದು ಹೇಳಿ ಹಿಂದಿರುಗಿ ಹೋಗಿ ಬಿಡುತ್ತಿದ್ದರು.

ಕೆಲವು ಶಿಲ್ಪಿಗಳು ಆ ಮಹಾಶಿಲೆಯನ್ನು ಪರೀಕ್ಷಿಸಿ, "ಇದು ವಜ್ರಪಾಷಾಣ. ಇದನ್ನು ಕೆತ್ತಬೇಕಾದರೆ

೧೬. ವಿಘ್ನೇಶ್ವರ ಮಹಾಶಿಲ್ಪ



ಸಾಮಾನ್ಯ ಉಳಿಗಳು ಉಪಯೋಗವಿಲ್ಲ. ವಜ್ರದ ಉಳಿಗಳೇ ಆಗಬೇಕು. ದೇವತೆಗಳೋ ಯಕ್ಷರೋ ಬಂದು ಕೆತ್ತಿದರೆ ನಿಮ್ಮ ಪುಣ್ಯ. ಮಾನವ ಮಾತ್ರರಿಂದ ಎಷ್ಟು ಮಾತ್ರಕ್ಕೂ ಆಗದು. ಇದರ ಸೂಕ್ಷ್ಮ ಭಾಗಗಳನ್ನು ಕೊರೆಯಲು ವಿಶೇಷ ದೃಷ್ಟಿ ಶಕ್ತಿಯೂ ಬೇಕು." ಎಂದು ಹೇಳಿದರು.

ಆ ಸಮಯದಲ್ಲಿ ದೇವಶಿಲ್ಪಿಯಾದ ವಿಶ್ವಕರ್ಮನಿಗೂ, ಅವನ ಹೆಂಡತಿಯಾದ ವಿಷ್ಣು ಮಾನಸ ಪುತ್ರಿ ವಿಶ್ವಕಳೆಗೂ ಜಗಳವೆದ್ದು, ವಿಶ್ವಕಳೆ ತೌರು ಮನೆಗೆ ಹೋಗಿ ಬಿಟ್ಟಿದ್ದಳು, ಅದರಿಂದ ವಿಶ್ವಕರ್ಮನು ಮತಿಗೆಟ್ಟು ತಿರುಗುತ್ತಿದ್ದನು. ದಾನವ ಶಿಲ್ಪಿಯಾದ ಮಯನಿಗೂ ಹಾಗೇ ಆಗಿತ್ತು. ಅವನ ಅಪ್ಸರಸ ಪತ್ನಿಯಾದ ಹೇಮಾ ಮತ್ತೆ ದೇವಲೋಕಕ್ಕೆ ಹೊರಟು ಹೋದುದರಿಂದ, ಮಯನು ಹುಚ್ಚು ಹಿಡಿದು ಎಲ್ಲಿ ತಿರುಗುತ್ತಿರುವನೆಂದು ಯಾರಿಗೂ ಗೊತ್ತಿಲ್ಲ. ವಿಶ್ವಕರ್ಮನನ್ನೋ ಮಯನನ್ನೋ ಕರೆಯೋಣವೆಂದರೆ ಅವರ ಪರಿಸ್ಥಿತಿ ಅಷ್ಟರ ಮಟ್ಟಿಗೆ ಕೆಟ್ಟು ಹೋಗಿತ್ತು. ಎಂಥವರಾದರೂ ಮನಸ್ಥಿಮಿತ ತಪ್ಪಿದವರಾದರೆ ಯಾವ ಕೆಲಸಕ್ಕೂ ಯೋಗ್ಯವಾಗಲಾರರಷ್ಟೆ?

ಹೀಗಾಗಿ ಮಹಾಶಿಲೆಯನ್ನು ವಿಘ್ನೇಶ್ವರ ವಿಗ್ರಹವಾಗಿ ಮಾಡಿಸಬೇಕೆಂಬ ಕೋರಿಕೆ ದೊಡ್ಡ ಸಮಸ್ಯೆಯೇ ಆಯಿತು. ಅವನು ನಿದ್ರಾಹಾರಗಳನ್ನು ಬಿಟ್ಟು ಶಿಲೆಯ ಇದಿರಿನಲ್ಲಿ ಹಗಲೂ ರಾತ್ರಿಯೂ ನಿಶ್ಚಲನಾಗಿ ಕುಳಿತುಕೊಂಡು ವಿಘ್ನೇಶ್ವರನನ್ನು ಧ್ಯಾನಿಸುತ್ತ, "ಗಣನಾಯಕಾ! ವಿನಾಯಕಾ! ನನ್ನ ಆಶೆಯನ್ನು ನಿರಾಶೆಯಾಗಿ ಮಾರ್ಪಡಿಸಿದೆಯಾ? ನಾನು ನಿನಗೇನು ತಪ್ಪು ಮಾಡಿದ್ದೇನೆ? ಅಥವಾ ಬೇರೆಯಾರಿಗಾದರೂ ಮಾಡಿದ್ದೇನೆಯೆ? ನನಗೇನೂ ತೋರದು! ನಿನಗೇ ಶರಣಾಗಿದ್ದೇನೆ. ಎಲ್ಲಾ ನಿನ್ನದೇ ಭಾರ!" ಎಂದು ಸ್ಮರಣೆ ಮಾಡುತ್ತಾ, ಆಗಾಗ ನಾಲ್ಕು ದಿಕ್ಕುಗಳನ್ನೂ ನಿರೀಕ್ಷಿಸಿಕೊಂಡಿದ್ದನು.

ಒಂದು ದಿನ ಸಂಧ್ಯಾ ಸಮಯದಲ್ಲಿ, ಒಂದು ಕಿರಿಯ ಆಕಾರವು ಬರುವುದು ಕಂಡಿತು. ಅವನೊಬ್ಬ ಹುಡುಗ ಪ್ರಾಯದವನು. ತನ್ನ ಬೊಜ್ಜು ಹೊಟ್ಟೆಯನ್ನು ತಡವಿಕೊಂಡು ಓಲಾಡಿಸುತ್ತ, ಗುಡುಗುಡು ನಡಿಗೆಯಿಂದ ಬರುತ್ತಿದ್ದ. ಅವನ ತಲೆಗೂದಲು ಧೂಳು ಹೊಡೆದುಕೊಂಡು ಕೆದರಿ ಗಾಳಿಗೆ ಹಾರುತ್ತ ಹಣೆಯ ಮೇಲೆ ಕಣ್ಣಿಗೆ ಅಡ್ಡಡ್ಡ ಬರುತ್ತಿದ್ದಿತು. ಸಮೀಪಿಸಿದಂತೆ ಅವನ ಕೈಯಲ್ಲಿ ಉಳಿಯಂತೆ ಹಿಡಿದಿದ್ದ ಯಾವುದೋ ವಸ್ತು ತಳತಳ ಹೊಳೆಯುತ್ತಿದ್ದಿತು. ಖಿಂಡಪುಷ್ಟಿಯಿಂದೊಪ್ಪುವ ಯಾವನೋ ಬಾಲಶಿಲ್ಪಿಯಂತೆ ಕಾಣುತ್ತಿದ್ದನು. ಯಾರಿವನು? ಇತ್ತಲೇ ಏಕೆ ಬರುತ್ತಿದ್ದಾನೆ?

ಅಗಸ್ತ್ಯನು ಅತ್ಯಾಸಕ್ತಿಯಿಂದ ಅವನ ಕೈಯ್ಯಲ್ಲಿರುವುದನ್ನು ಪರೀಕ್ಷಿಸಿ ನೋಡಿದನು. ಅದು ಆನೆಯ ದಂತದ ಕೊನೆಯ ತುಂಡನ್ನು ಹಿಡಿಗೆ

ಬಗಿಸಿದಂತಿರುವುದನ್ನು ನೋಡಿ ಅಗಸ್ತ್ಯನಿಗೆ ಅತ್ಯಾಶ್ಚರ್ಯವಾಯಿತು. ಆ ತರುಣ ಶಿಲ್ಪಿ ಅಗಸ್ತ್ಯನ ಸಮೀಪ ಬಂದು, "ಮಹರ್ಷಿಗಳು ಈ ಮಹಾ ಶಿಲೆಯ ಮುಂದೆ ಕುಳಿತು ಗಾಢಾಲೋಚನೆಯಲ್ಲಿ ಮುಳುಗಿದ ಹಾಗಿದೆ ? ಈ ಶಿಲೆ ತುಂಬಾ ಚೆನ್ನಾಗಿದೆ! ನನಗೇನಾದರೂ ಶಿಲಾವೃತ್ತಿ ಸಿಗುವುದೇನೋ ಅಂತ ತಿರುಗುತ್ತಾ ಬಂದೆನು" ಎಂದನು.

ಮಧುರವಾದ ಅವನ ಮಾತುಗಳನ್ನು ಕೇಳಿ ಅಗಸ್ತ್ಯನು ಪರವಶನಾದನು.

"ಚಿರಂಜೀವಿ ! ಈ ಮಹಾಶಿಲೆಯನ್ನು ಗಣಪತಿ ದೇವನ ವಿಗ್ರಹ ರೂಪದಲ್ಲಿ ನೋಡಬೇಕೆಂದು ತುಂಬಾ ಆಶೆಯಿಂದ ಕುಳಿತಿದ್ದೇನಪ್ಪಾ" ಎಂದು ತನ್ನ ಹತ್ತಿರವಿದ್ದ ರೇಖಾಚಿತ್ರವನ್ನು ಆ ಹುಡುಗನಿಗೆ ತೋರಿಸಿ. "ಏನೋ ಶಿಲಾವೃತ್ತಿ ಹುಡುಕುವುದು ಅಂದೆಯಲ್ಲಾ ? ಯಾರು ನೀನು ? ಏನು ಕೆಲಸ ಮಾಡುತ್ತಿ ? ಈ ಶಿಲೆಯಲ್ಲಿ ನೀನೇನು ಮಾಡುವೆ ?" ಎಂದು ಕೇಳಿದನು ಅಗಸ್ತ್ಯ.

"ನಾನು ಮಾಡುವ ಕೆಲಸವೆಂದರೆ ಮೊದ ಲನೆಯದು ಹೊಟ್ಟೆ ತುಂಬ ತಿನ್ನುವುದು. ಆಮೇಲೆ ಶಿಲ್ಪ ಕೆತ್ತುವುದು. ನನ್ನನ್ನು ಬಾಲಶಿಲ್ಪಾಚಾರ್ಯ ನೆಂದೇ ಕರೆಯುತ್ತಾರೆ. ಎಂಥ ಶಿಲೆಯಾದರೂ ನನ್ನ ಕೈಗೆ ಬೆಣ್ಣೆ ಮುದ್ದೆ !" ಎಂದನು ಆ ಬಾಲಶಿಲ್ಪಿ.

ಅವನು ಹೇಳುವ ರೀತಿ ನೋಡಿ ಅಗಸ್ತ್ಯನಿಗೆ ನಗು ಬಂದಿತು. ಅವನು ಸಂದೇಹದಿಂದ ಅವನನ್ನು ನೋಡುತ್ತ, "ಈ ಮಹಾಶಿಲೆಯನ್ನು ಮಹಾ ಶಿಲ್ಪವಾಗಿ ರೂಪಿಸಬಲ್ಲಂತಹ ಮಹಾಶಿಲ್ಪಿಗಾಗಿಯೇ ನಾನಿಲ್ಲಿ ಕಾದು ಕುಳಿತುಕೊಂಡಿದ್ದೇನೆ. ಶಿಲ್ಪಿ ಎಂದು ನೀನು ಹೇಳಿಕೊಳ್ಳುವೆಯಾಗಲಿ. ಬಾಲನಾಗಿರುವಿ ಯಲ್ಲಪ್ಪಾ ? ಶಿಲೆ ನೋಡಿದರೆ ಬ್ರಹ್ಮಾಂಡವಾಗಿದೆ: ನೀನೋ ನನ್ನ ಹಾಗೇ ಕುಳ್ಳ ಹುಡುಗ. ಹುಡುಗಾಟದ ಹಸಿರು ಇನ್ನೂ ಮಾಸಿಲ್ಲದವನು. ಹೀಗಿರುವಾಗ



ಮಹಾಶಿಲ್ಪವಾಗಿ ಇದನ್ನು ಮಾಡಬಲ್ಲೆಯಾ ಎಂದು ನಿನ್ನನ್ನು ಹೇಗೆ ಕೇಳಲಿ ? ನಿನ್ನ ಹಿರಿಯರಾರಾದರೂ ಇದ್ದರೆ ಹೇಳಪ್ಪ." ಎಂದನು ನಿಟ್ಟುಸಿರುಬಿಟ್ಟು.

"ಕುಳ್ಳಾ ಅಂದ ಮಾತ್ರಕ್ಕೆ ಕಡಿಮೆ ಅಂದು ಕೊಂಡಿರಾ ? ನೀವೂ ಕುಳ್ಳರು. ಸಾಮಾನ್ಯದವರೇ ನಲ್ಲವಷ್ಟೆ ? ನಾನೂ ಹಾಗಿರುವುದಕ್ಕೆ ಸರಿಹೋಯಿ ತೆಂದು ಕೊಂಡು ಗಟ್ಟಿ ನಂಬುಗೆಯಿಂದ ಹೇಳಿ ಬಿಡಿ. ಮಹಾ ಶಿಲ್ಪಿಗಳೆಂದುಕೊಳ್ಳುವವರೆಲ್ಲ ದೊಡ್ಡವ ರಾಗಿ ಬಿಡುವುದಿಲ್ಲ. ನನ್ನ ಉಳಿಚಾಣಗಳಿಗೆ ಸಾಧ್ಯ ವಾಗದ್ದೇ ಇಲ್ಲ ಗೊತ್ತಾ ?" ಎಂದು ಬಾಲನು ಉಳಿಯನ್ನು ತೆಗೆದು ತೋರಿಸಿದನು. ಅದು ವಜ್ರದ ಹಾಗೆ ಜಗ ಜಗ ಹೊಳೆಯುತ್ತಿದ್ದಿತು.

ಅಗಸ್ತ್ಯನು ಬೆರಗಾಗಿ ನೋಡುತ್ತಿರಲು. ಬಾಲ ಶಿಲ್ಪಿ, ಆ ಉಳಿಯನ್ನು ಮಹಾಶಿಲೆಯ ಕಡೆಗೆ ಬೀಸಿ ಬಿಸುಟನು. ಕಾಂತಿ ಪುಟಿಸುವ ಕಿಡಿಗಳೂ, ಶಬ್ದವೂ ಹೊರಡಲು, ಉಳಿ ಚುಚ್ಚಿದ ಶಿಲೆಯ ಮೇಲೆ



ಒಂದು ರಂಧ್ರವು ಏರ್ಪಟ್ಟಿತು. ಅದನ್ನು ನೋಡಿ ಶಿಲೆಗೇನೋ ಭೇದವಾಯಿತೆಂದು ಅಗಸ್ತ್ಯನು ಗಾಬರಿಯಾದನು.

"ಅದು ನಾಭೀಸ್ಥಾನ. ಮೂರ್ತಿ ಶಿಲ್ಪಕ್ಕೆ ನಾಭೀ ಸ್ಥಾನವು ಬಹಳ ಮುಖ್ಯ. ಅದರ ಮೇಲೆ ಲಂಬೋದರ ನಾಭಿ ಎಂದರೆ ಕೇಳಬೇಕೆ? ಲಂಬೋದರ ದಿಂದಲೇ ನನ್ನ ಶಿಲ್ಪಕಾರ್ಯ ಪ್ರಾರಂಭವಾಯಿತೆಂದು ತಿಳಿಯಿರಿ!" ಎಂದನು ಬಾಲಶಿಲ್ಪಿ. ಆ ಮಾತಿಗೆ ಪ್ರತಿಧ್ವನಿಯಾಗಿ, ಆ ಬಂಡೇಗಲ್ಲಿನ ಕಡೆಯಿಂದ ಉಳಿಯಿಂದೆದ್ದ ಧ್ವನಿ ಇನ್ನೂ ಸ್ಪಂದಿಸುವಂತೆ ಮೂಳವರಾಗದ ಸಣ್ಣಗಿನ ಹಾಡು ಅಗಸ್ತ್ಯನ ಕಿವಿಗೆ ಬೀಳುತಿತ್ತು. ಆಗ ಅಗಸ್ತ್ಯನಲ್ಲಿ ಒಮ್ಮೆಗೇ ರೋಮಾಂಚನವೆದ್ದಿತು!

"ಇದು ಅಯಸ್ಕಾಂತ ಶಿಲೆ. ಕೆತ್ತುತ್ತಿರುವಾಗ ಪ್ರಚಂಡವಾದ ವಿದ್ಯುತ್ಕಾಂತಿ ಹೊರಡುತ್ತಿರುತ್ತೆ. ಆದುದರಿಂದ ಶಿಲ್ಪಕಾರ್ಯ ಮುಗಿಯುವವರೆಗೂ ಸುತ್ತಮುತ್ತಲು ಒಂದು ನರಪ್ರಾಣಿಯೂ ಇರಬಾರದು. ದೊಡ್ಡದೊಡ್ಡ ಧ್ವನಿಗಳು ಏಳುತ್ತಾ ಇರುತ್ತವೆ. ಅದನ್ನು ಕೇಳಿ ನಗರವಾಸಿಗಳು ಹೆದರಿ ಬಿದ್ದು ಗಾಬರಿಯಾಗ ಬೇಕಾಗಿಲ್ಲ. ಓ ಮಹರ್ಷೀ! ಇನ್ನು ನೀವು ಹೋಗಿರಿ. ನಿಶ್ಚಿಂತೆಯಾಗಿ ರಾತ್ರಿ ಪೂರಾ ನಿದ್ದೆ ಮಾಡಿರಿ, ಬೆಳಗಾಗುವಾಗ ಶಿಲ್ಪವು ಪೂರ್ತಿಯಾಗುತ್ತದೆ. ಆಗಬಂದು ನೋಡಿ, ಅಭಿಪ್ರಾಯ ಹೇಳಿರಿ." ಎಂದನು ಬಾಲ ಶಿಲ್ಪಿ.

ಅಗಸ್ತ್ಯನು ಆಶ್ಚರ್ಯಪಡುವುದೊಂದೇ ಹೊರತು ಏನೂ ಹೇಳಲಿಲ್ಲ. ಅವನ ಬುದ್ಧಿಗೆ ನಿದ್ದೆಕವಿದ ಹಾಗೆಯೇ ಆಯಿತು. ಸ್ವಲ್ಪ ಎಚ್ಚರಕ್ಕೆ ಬಂದು, ರೇಖಾ ಚಿತ್ರವನ್ನು ತೆಗೆದು ಬಾಲ ಶಿಲ್ಪಿಗೆ ಕೊಡಲು ನೋಡಿದನು.

"ಆಗಲೇ ನೋಡಿದೆನಲ್ಲಾ? ತೋರಿಸಿದಿರಷ್ಟೆ? ಒಂದು ಸಾರಿ ನೋಡಿದರೇ ಸಾಕು. ಪದೇ ಪದೇ ನೋಡುತ್ತಾ ಶಿಲ್ಪ ಕೆತ್ತುವವನು ಮಹಾ ಶಿಲ್ಪಿ ಹೇಗಾದಾನು? ಶಿಲ್ಪವನ್ನು ಒಂದು ಆಟದ ಹಾಗೆ ಕೆತ್ತಿ ಕೊರೆಯುವ ಬಾಲ ಶಿಲ್ಪಿ ನಾನು. ಎಲ್ಲಾ ಮುಗಿದ ಮೇಲೆ ಚಿತ್ರ ಗೀಚಿದವರನ್ನು ಬಂದು ನೋಡಲು ಹೇಳಿರಿ, ಸರಿಯಾಗಿದೆಯೋ ಇಲ್ಲವೋ ಹೇಳಲಿ. ಈ ಚಿತ್ರ ಬರೆದವರಿಗೆ ಏನು ಕೊಟ್ಟಿರೋ ನಾನರಿಯೆ. ನನಗೆ ಏನು ಪ್ರತಿಫಲ ಕೊಡುವಿರೆಂದು ನೋಡಬೇಕು." ಎಂದನು ಆ ಬಾಲ ಶಿಲ್ಪಿ. ಈ ಕೊನೆಯ ಮಾತು ಅಗಸ್ತ್ಯನಿಗೆ ಭಯವನ್ನು ಹುಟ್ಟಿಸಿತು.

ತನ್ನ ಹೆಂಡತಿ ಲೋಪಾಮುದ್ರೆಯ ಆಶೆಯಂತೆ ಇರಿಸಿಕೊಂಡ ಧನದ ಹೊರತು ತನ್ನದೆನ್ನುವ ಬೇರೆ ಧನ ಯಾವುದೂ ಅಗಸ್ತ್ಯನ ಬಳಿಯಲ್ಲಿರಲಿಲ್ಲ. ಎಲ್ಲವನ್ನೂ ಹಂಚಿ ಕೊಟ್ಟಾಗಿತ್ತು. ಇನ್ನು ಈ ಶಿಲ್ಪಿಗೆ ಪಾರಿತೋಷಿಕವಾಗಿ ಆ ಸ್ವಲ್ಪ ಧನವನ್ನು ಕೂಡಾ ಕೊಡದೆ ಗತ್ಯಂತರವಿಲ್ಲ. ಆ ಮೇಲೆ ಲೋಪಾಮುದ್ರೆಗೆ ಏನು ಹೇಳಲಿ?



ಹೀಗೆ ಚಿಂತಿಸುತ್ತಾ ಅಗಸ್ತ್ಯನು ತನ್ನ ಬಿಡಾರವನ್ನು ತಲಪಿದನು. ಆ ದಿನ ಹೊಸದಾಗಿ ಲೋಪಾಮುದ್ರೆಯ ಮುಖದಲ್ಲಿ ದೀಪ ಬೆಳಗುವಂತೆ ಹೊಸ ಪ್ರಕಾಶ ಕಾಣುತ್ತಿತ್ತು. ಏನು ವಿಶೇಷವೆಂಬ ಹಾಗೆ ಅಗಸ್ತ್ಯನು ಅವಳ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿದನು.

ಲೋಪಾಮುದ್ರೆ ಆತ್ಮಾನಂದದಿಂದ, "ನೀವು ನನ್ನನ್ನು ಕ್ಷಮಿಸಬೇಕು, ಋಷಿ ಪತ್ನಿಯಾದ ನಾನು ಋಷಿ ಪತ್ನಿಯ ಹಾಗಿರುವುದನ್ನು ಬಿಟ್ಟು, ಯಾಕೆ ಹೀಗೆಲ್ಲ ಹೇಳಿದೆನೋ ಗೊತ್ತಾಗುವುದಿಲ್ಲ. ಋಷಿಪತ್ನಿ ಹೇಗಿರಬೇಕೆಂದು ನನಗೆ ಚೆನ್ನಾಗಿಯೇ ಗೊತ್ತಿತ್ತು. ನಗನಟ್ಟು ಒಳ್ಳೊಳ್ಳೆಯ ಬಟ್ಟೆಗಳೆಲ್ಲ ಬೇಕೆಂದು ಹೇಳಿ ಧನಶೇಖರಣೆಯ ಶ್ರಮಕ್ಕೆ ನಿಮ್ಮನ್ನು ಏಕೆ ಹೇಳಿದೆನೆಂದು ಆಶ್ಚರ್ಯವಾಗುತ್ತದೆ. ಏನೋ ಹೊಸ ಕಾರ್ಯ ನೆರವೇರುವ ಹಾಗೆ ಆಗಲಿಕ್ಕಾಗಿ ಯಾವುದೋ ಶಕ್ತಿ ನನ್ನ ಮುಖದಿಂದ ಆ ಮಾತು ಹೊರಡಿಸಿದೆ. ನನಗೆ ಯಾವ ಆಭರಣಗಳೂ ಬೇಡ, ನನ್ನಲ್ಲಿ ತಾತ್ಕಾಲಿಕವಾಗಿ ಪ್ರವೇಶಿಸಿದ ಅಜ್ಞಾನವು ತೊಲಗಿತು. ಉಳಿದ ಧನವನ್ನೆಲ್ಲಾ ದಾನಧರ್ಮ ಮಾಡಿಬಿಡಿ" ಎಂದಳು.

ಅವಳ ಮಾತುಗಳನ್ನು ಕೇಳಿ ಅಗಸ್ತ್ಯನು ತನ್ನೊಳಗೆ ಸಂತೋಷಿಸುತ್ತ "ಶಿಲ್ಪಿ ದೊರೆತನು. ತೇಜಸ್ವೀ ಬಾಲಕ! ಬೆಳಗಾಗುವಾಗಲೇ ಶಿಲ್ಪ ತಯಾರಾಗುತ್ತದಂತೆ!" ಎಂದನು ಅಗಸ್ತ್ಯ.

"ಏನೇನು? ಬೆಳಗಾಗುವಾಗ ಆ ಮಹಾ ಶಿಲೆ ಶಿಲ್ಪವಾಗುತ್ತದೆಯೆ? ಶಿಲ್ಪಿ ಯಾರು? ದೇವನೋ?" ಎಂದಳು ಲೋಪಾಮುದ್ರೆ.

"ಮಾನವಮಾತ್ರನೇ. ಚಿಕ್ಕ ಹುಡುಗ. ಈಗ ಅವನಿಗೆ ಪ್ರತಿಫಲ ಹೇಗೆ ಕೊಡಬೇಕೋ ಎಷ್ಟು ಕೊಡಬೇಕೋ ಗೊತ್ತಾಗುವುದಿಲ್ಲ. ವಿನಾಯಕನೇ ಗತಿ!" ಎಂದನು ಅಗಸ್ತ್ಯ.

"ನನಗೋಸ್ಕರ ಇರಿಸಿಕೊಂಡ ಧನವಿದೆಯಲ್ಲವೇ? ಅದು ಸಾಲದೇ?" ಎಂದಳು ಲೋಪಾಮುದ್ರೆ.

"ಅದೊಂದು ಸಮಾಧಾನವಿದೆ ಅನ್ನು. ಬೆಳಗಾದ ಮೇಲೆ ಏನೋ ಒಂದು ನೋಡಿದರಾಯಿತು." ಎಂದನು ತುಸುಹಗುರಾದ ಮನಸ್ಸಿನಿಂದ ಅಗಸ್ತ್ಯ.

"ಅಂದ ಹಾಗೆ ನಾಳೆ ಭಾದ್ರಪದಶುದ್ಧ ಚತುರ್ಥಿ. ವಿನಾಯಕ ಚತುರ್ಥಿಯ ದಿನ. ಶಿಲ್ಪದ ಧ್ಯಾನದಲ್ಲಿದ್ದು ನೀವು ತಿಥಿ ವಾರ ತಿಂಗಳನ್ನೆಲ್ಲ ಮರೆತಿರಿ!" ಎಂದಳು ಲೋಪಾಮುದ್ರೆ.

"ಏನು? ನಾಳೆ ವಿನಾಯಕ ಚತುರ್ಥಿಯೆ! ವಿಘ್ನೇಶ್ವರನ ಶಿಲ್ಪ ನಾಳೆಗೇ ತಯಾರೆಂದರೆ ಏನು ವಿಚಿತ್ರ!" ಎಂದು ಅಗಸ್ತ್ಯನು ಆಶ್ಚರ್ಯ ಪಡುತ್ತಿರಲು, ಲೋಪಾಮುದ್ರೆ "ಆ ಶಿಲ್ಪಿ ಬಾಲನೂ ಅಲ್ಲ, ಮಾನವ ಮಾತ್ರನೂ ಅಲ್ಲ! ಓ! ಗೊತ್ತಾಯಿತು!" ಎಂದಳು. ಹೆಂಡತಿಯ ಮಾತಿನಲ್ಲಿ ಏನೋ ಅದ್ಭುತ ಸತ್ಯ



ವಿರುವಂತೆ ಆಗಸ್ತ್ಯನಿಗೆ ತೋರಿತು. ಬಹಳ ರಾತ್ರಿಯಾದರೂ ಆಗಸ್ತ್ಯನಿಗೆ ನಿದ್ದೆ ಹತ್ತಲಿಲ್ಲ. ಕುತೂಹಲ ಹೆಚ್ಚುತ್ತಿರಲು, ಏನು ನಡೆಯುತ್ತದೋ ನೋಡಬೇಕೆಂದು ಆಗಸ್ತ್ಯನು ಹೊರಟನು.

ಆಗಸ್ತ್ಯನು ಮಹಾ ಶಿಲೆಯ ಸಮೀಪಕ್ಕೆ ಬರುವ ಹೊತ್ತಿಗೆ, ಅಲ್ಲಿ ಕಾಣುವ ದೃಶ್ಯವು ಅವನಿಗೆ ರೋಮಾಂಚನವನ್ನುಂಟುಮಾಡಿತು. ಸ್ಪೃಹೆ ತಪ್ಪುವಂತೆನಿಸಿ ಹಾಗೆಯೇ ಕುಳಿತು ಬಿಟ್ಟನು. ಕೆಲವು ನೂರು ಉಳಿಗಳು ತನ್ನಂತಾನೇ ಶಿಲೆಯ ಮೇಲೆ ಚಕಚಕನೆ ಶಿಲ್ಪಕೆತ್ತುತ್ತಿದ್ದುವು, ಬಣ್ಣ ಬಣ್ಣದ ವಿದ್ಯುತ್ಕಾಂತಿಗಳು ಮಿಂಚಿಕೊಂಡು ಅಲ್ಲೆಲ್ಲಾ ಪ್ರಕಾಶವಾಗಿದ್ದಿತು. ಖಣಖಣ ಧ್ವನಿಗಳೆಲ್ಲ ಒಂದಾಗಿ ಹೋರ್ದನಿಗೊಡುತ್ತಿದ್ದುವು. ಉಳಿಗಳೆಲ್ಲ ಆನೆಯ ದಂತದ ಕೊನೆಗಳಾಗಿ ವಜ್ರದಂತೆಹೊಳೆಯುತ್ತಿದ್ದುವು. ಅದು ಸ್ವಪ್ನವೋ ನಿಜವೋ ತಿಳಿಯದ ವಿಭ್ರಾಂತಿಯಲ್ಲಿ ಆಗಸ್ತ್ಯನಿಗೆ ಮಯಕ ಕವಿದು, ಹಾಗೆಯೇ ನಿದ್ದೆಯಲ್ಲಿ ಬಿದ್ದನು. ಮತ್ತೆ ಅವನು ನಿದ್ದೆಯಿಂದೆದ್ದು ಕಣ್ಣು ತೆರೆದಾಗ, ಅವನನ್ನು ತಟ್ಟಿ ಎಬ್ಬಿಸುವ ಬಾಲ ಶಿಲ್ಪಿಯನ್ನು ನೋಡಿದನು. ಮೂಡು ದಿಕ್ಕು ಕೆಂಪಗಾಗಿತ್ತು.

"ಇದೇನು ಮಹರ್ಷೀ! ಇಲ್ಲಿ ಹೀಗೆ ನಿದ್ರಿಸಿಕೊಂಡು ಕನಸು ಕಾಣುವಿರಾ? ಯೋಗನಿದ್ರಾಪಾರಂಗತರಾದ ನಿಮಗೆ ಕನಸಿನ ನಿದ್ರೆ ಅಂದರೇನು? ಶಿಲ್ಪವು ಪೂರ್ತಿಯಾಯಿತು. ಚಿತ್ರ ಬರೆದವರನ್ನು ಬಂದು ನೋಡಲು ಹೇಳಿರಿ. ಚಿತ್ರಕ್ಕೆ ಸರಿಯಾಗಿ ರೂಪಿಸಲ್ಪಟ್ಟಿದೆಯೋ ಇಲ್ಲವೋ? ನನ್ನ ಕೆಲಸವಂತೂ ತೀರಿತು!" ಎಂದು ಶಿಲ್ಪಿ ಹೇಳಿದನು.

ಆಗ ಅಲ್ಲಿಗೆ ತಾಂಬಾಣದಲ್ಲಿ ತುಂಬಾ ಮೋದಕಗಳನ್ನೂ, ಉಂಡ್ಲುಕೆಗಳನ್ನೂ, ಬಾಳೇ ಹಣ್ಣುಗಳನ್ನೂ ನೀರನ್ನೂ ಹೂಗಳನ್ನೂ ಇಟ್ಟುಕೊಂಡು ಲೋಪಾಮುದ್ರೆ ಬರುತ್ತಿದ್ದಳು.

ಆಗಸ್ತ್ಯನು ಸಂಭ್ರಮಾಶ್ಚರ್ಯಗಳಿಂದ ಸ್ಫಟಿಕದಂತೆ ಜಗಜಗಿಸುವ ವಿಘ್ನೇಶ್ವರ ಮಹಾಶಿಲ್ಪವನ್ನು ನೋಡುತ್ತಿರಲು, ಬಾಲ ಶಿಲ್ಪಿ ಆಗಸ್ತ್ಯನೊಂದಿಗೆ, "ನನಗೆ ಕೊಡುವ ಪ್ರತಿಫಲವೇನೋ ಕೊಟ್ಟು ಬಿಡಿರಿ." ಎಂದನು.

ಆಗಸ್ತ್ಯನು ನಾಲಗೆ ತಡವರಿಸಿಕೊಳ್ಳಲು, "ಹೌದು. ನಿಜ. ಓ ಮಹಾಶಿಲ್ಪೀ! ನಿನಗೆ ಏನು ಕೊಟ್ಟರೂ ಸಾಲದು. ಆದರೂ ಚಂದ್ರನಿಗೊಂದು ದಾರದ ಚೂರು ಎಂಬ ಹಾಗೆ ಸ್ವಲ್ಪ ಮಾತ್ರ ಧನವಿಟ್ಟುಕೊಂಡಿದ್ದೇನೆ. ತರುತ್ತೇನೆ" ಎಂದನು.

"ಸರಿ ಸರಿ." ಎಂದು ಬಾಲಶಿಲ್ಪಿ ತಲೆಯಾಡಿಸಿ "ಹೌದಯ್ಯಾ, ಋಷಿಗಳೇ, ಈ ರೇಖಾ ಚಿತ್ರ ಬರೆದವರಿಗೆ ಏನು ಕೊಟ್ಟರೋ ಅದನ್ನು ಮೊದಲು ಹೇಳಿರಿ. ಶಿಲ್ಪಕೆತ್ತುವುದು ಶ್ರಮವೇ ಹೊರತು, ಆದರ ದೊಡ್ಡತನವೆಲ್ಲಾ ಈ ಶಿಲ್ಪ ಕೃತಿಗೆ ಮೂಲ

ವಾದ ರೇಖಾ ಚಿತ್ರವ್ವೇ. ಚಿತ್ರಣವೆಂಬುದು ಊಹಾ ಶಕ್ತಿಗೆ ಕೂಡಿದ ಮೇಧಸ್ಸಿನ ಕಳೆ !" ಎಂದನು.

"ಅಯ್ಯಾ, ಬಾಲಶಿಲ್ಪಾಚಾರ್ಯಾ, ಚಿತ್ರ ಬರೆದ ವರಿಗೆ ಏನೂ ಕೊಡುವ ಅಗತ್ಯವಿಲ್ಲ. ಅದನ್ನು ತಯಾರಿಸಿದವಳು ನನ್ನ ಹೆಂಡತಿಯೇ" ಎಂದು ಲೋಪಾಮುದ್ರೆಯನ್ನು ತೋರಿಸುವವನಂತೆ ಅವಳನ್ನು ನೋಡಿದನು ಅಗಸ್ತ್ಯ. ಲೋಪಾಮುದ್ರೆ ತನ್ಮಯಸ್ಥಿತಿಯಲ್ಲಿದ್ದಳು.

"ಏನು ಮಾತು ಹೇಳಿದಿರಿ ಋಷಿಗಳೇ? ನಾನಾಗಿರುತ್ತಿದ್ದರೆ ಒಂದು ಮಹಾ ನಗರವನ್ನು ನಿರ್ಮಿಸಲು ಬೇಕಾದಷ್ಟು ಧನವನ್ನು ಚಿತ್ರಕ್ಕೆ ಕೊಡುತ್ತಿದ್ದೆ. ಅಷ್ಟು ಮಹತ್ವದ ರೇಖಾ ಚಿತ್ರವದು. ಆ ಧನವೆಲ್ಲಾ ಆಕೆಗೇ ಸಲ್ಲಬೇಕು" ಎಂದನು ಬಾಲಶಿಲ್ಪಿ.

"ನಿಜಕ್ಕೂ ಅದನ್ನು ಅವಳಿಗಾಗಿಯೇ ಇರಿಸಿದ್ದೆ ನಪ್ಪಾ!" ಎಂದು ಬಾಯಿ ಜಾರಿ ಹೇಳಿಬಿಟ್ಟನು ಅಗಸ್ತ್ಯ.

ಬಾಲಶಿಲ್ಪಿ ಆಶ್ಚರ್ಯಪಡುತ್ತ, "ಏನಂದಿರಿ? ಓ! ಅದು ಸ್ತ್ರೀಧನವನ್ನಿರಿ! ನನ್ನ ಪುಣ್ಯ! ಮೊದಲೇ ಹೇಳಿದಿರಿ! ಅದನ್ನು ನೀವು ನನಗೆ ಕೊಟ್ಟು, ನಾನು ತೆಗೆದುಕೊಂಡು ಹೋಗುತ್ತಿದ್ದರೆ ಎಂತಹ ಅನ್ಯಾಯವಾಗುತ್ತಿತ್ತು! ಅದರಲ್ಲಿಯ ಒಂದು ಚಿಕ್ಕಾಸುಕೂಡಾ ನನಗೆ ಬೇಡ!" ಎಂದು ಲೋಪಾಮುದ್ರೆಯನ್ನು ನೋಡಿ, "ಅಮ್ಮಾ, ನಿನ್ನ ಕೈಯಿಂದ ಒಂದು ಮೋದಕವನ್ನೂ, ನಾಲ್ಕು ಉಂಡ್ಲುಕವನ್ನೂ, ಚೂರುಕಡುಬನ್ನೂ ನನಗೆ ಕೊಡು. ಚಕ್ಕಡಿ ಎಳೆದದ್ದಕ್ಕೆ ಮುಕ್ಕಿದ್ದೇ ಕೂಲಿ ಎಂಬ ಹಾಗೆ ಶಿಲ್ಪಿಗಳ ಹಣೆಯಲ್ಲಿ ಬ್ರಹ್ಮ ಎಂದೋ ಬರೆದಿಟ್ಟಿದ್ದಾನೆ" ಎಂದನು.

ಅವನು ಹೇಳಿದ ಮಾತು ಕೇಳಿ ಲೋಪಾಮುದ್ರೆ ತಾಂಬಾಣವನ್ನು ಅವನ ಮುಂದಿಟ್ಟು, ಅಡ್ಡ ಬಿದ್ದು ಬಾಲಶಿಲ್ಪಿಯ ಪಾದ ಹಿಡಿದು, "ವಿಘ್ನೇಶ್ವರಾ! ನಿನ್ನ ಅನುಗ್ರಹದಿಂದ ನಮ್ಮ ಜನ್ಮ ತಾರಕವಾಯಿತು" ಎಂದಳು. ಮರುಕ್ಷಣದಲ್ಲಿ ಬಾಲ ಶಿಲ್ಪಿ ಮಾಯವಾದನು.

ಅಗಸ್ತ್ಯನನ್ನು ಆವರಿಸಿದ ಮಾಯೆ ಬಿಟ್ಟು ಹೋಯಿತು ಅಗಸ್ತ್ಯನು ಮಹಾ ಶಿಲ್ಪದ ಮುಂದೆ ಸಾಷ್ಟಾಂಗ ಬಿದ್ದು, "ವಿಘ್ನೇಶ್ವರಾ! ನಾನು ದೊಡ್ಡ ಯೋಗಬಲವುಳ್ಳವನೆಂದು ಗರ್ವಪಡುತ್ತಿರುವಾಗ, ನೀನು ನನ್ನ ಕಣ್ಣು ತೆರೆಯಿಸಿದಿ. ಎಂತಹವನಾದರೂ ನಿನ್ನ ಮಾಯೆಗೆ ಅತೀತನಲ್ಲ." ಎಂದು ನಮಸ್ಕಾರ ಮಾಡಿ ಗಲ್ಲಬಡೆದುಕೊಂಡನು. ಆಗ ಶಿಲ್ಪದೊಳಗಿನ ದೇವತೆಗಳೆಲ್ಲಾ ಕೂಡಿ ಹಾಡುವಂತೆ, "ವಾತಾಪಿ ಗಣಪತಿಂ ಭಜೇಹಂ" ಎಂಬ ಕೀರ್ತನೆಯು ಹಂಸ ಧ್ವನಿ ರಾಗಾಲಾಪನೆ ಕೇಳುತ್ತಿದ್ದಿತು,






2

ಮನೆಯಲ್ಲಿ ಮಲಗಿದ ಹಸನ್ನನಿಗೆ ನಿದ್ದೆ ಎಲ್ಲಿ ಬರಬೇಕು ? ನಿರಾಶೆಯ ಶೂನ್ಯಾಕಾಶದೊಳಗೆ ತಾನು ತೇಲುತ್ತಿರುವಂತೆ ಅವನಿಗೆ ತೋರಿತು. ಆಗ ಸಣ್ಣ ದೊಂದು ಕಿಡಿ ಬೆಳಕಿನ ಹಾಗೆ ಅವನಿಗೆ ರಾಜ ಕುಮಾರಿಯರಾದ " ಅಕ್ಕಂದಿರ " ಜ್ಞಾಪಕ ಬಂದಿತು. ಕೂಡಲೇ ಅವನು ತಾಯಿಗೆ ಹೋಗಿಬರುತ್ತೇನೆಂದು ಹೇಳಿ, ತಮಟೆಯ ಮೂಲಕ ಒಂಟೆಯನ್ನು ಬರಮಾಡಿ ಕೊಂಡು ಅದರ ಮೇಲೆ ಕುಳಿತು ಅಕ್ಕಂದಿರ ಬಳಿಗೆ ಹೋದನು.

ಅಷ್ಟು ಬೇಗನೇ ಅವನು ಬಂದುದನ್ನು ನೋಡಿ ಅಕ್ಕಂದಿರಿಗೆ ಆಶ್ಚರ್ಯವಾಯಿತು. ಅದಕ್ಕಿಂತ ಮೂರು ಪಾಲು ಹೆಚ್ಚಿಗೆ ಸಂತೋಷವೂ ಆಗಿ ಅವನನ್ನು ಉತ್ಸಾಹದಿಂದ ಬರಮಾಡಿಕೊಂಡರು. ಅವರೊಡನೆ ಅವನು ನಡೆದ ಸಂಗತಿಯನ್ನೆಲ್ಲ ಹೇಳಿ, ಶೋಕಾಕುಲನಾಗಿ ಕಣ್ಣೀರಿಳಿಸುತ್ತ ಕುಳಿತನು.

ಅವರು ತುಂಬಾ ಸಹಾನುಭೂತಿಯಿಂದ ಅವ ನನ್ನು ಸಮಾಧಾನಪಡಿಸಲು ಪ್ರಯತ್ನಿಸಿದರು. "ನನ್ನ ಪ್ರೀತಿಯ ಅಕ್ಕಗಳಿರಾ ! ವಾಕ್ ವಾಕ್ ದ್ವೀಪಗಳಿಗೆ ಹೋಗುವ ದಾರಿ ನನಗೆ ಹೇಳಿಬಿಡಿ. ಅಲ್ಲಿ ವಿಚಾರಿಸಿದರೆ ತನ್ನ ಜಾಡು ತಿಳಿಯುತ್ತದೆಂದು ನನ್ನ ಹೆಂಡತಿ ಹೇಳಿದ್ದಾಳಂತೆ. ಅದೊಂದು ಆಸೆ ಯಿಂದಲೇ ಬದುಕಿದ್ದೇನೆ " ಎಂದನು ಹಸನ್.

ಏಳು ಮಂದಿ ಸಹೋದರಿಯರೂ ಒಬ್ಬರ ನ್ನೊಬ್ಬರು ನೋಡಿಕೊಳ್ಳುತ್ತ ತಲೆ ತಗ್ಗಿಸಿಕೊಂಡರು. ಕಡೆಗೆ ಅವರು, " ಹಸನ್, ಕೈಚಾಚಿ ಸ್ವರ್ಗವನ್ನು ಎಟಕಿಸಿಕೊಳ್ಳಲು ಸಾಧ್ಯವಾದರೂ ಆಗಬಹುದು. ಆದರೆ ವಾಕ್ ವಾಕ್ ದ್ವೀಪಗಳಿಗೆ ಮಾತ್ರ ಹೋಗುವುದು ಸಾಧ್ಯವೇ ಇಲ್ಲ. ನಾವೇನು ಮಾಡ ಬಲ್ಲೆವಪ್ಪಾ !" ಎಂದರು. ಹಸನ್ ಇಟ್ಟುಕೊಂಡ ಕೊನೆಯ ಆಶೆಯಷ್ಟೂ ಆರಿ ಅಡಿಹೊತ್ತಿಹೋಯಿತು. ದುಃಖಾವೇಶದಿಂದ ಒಂದೇ ಕಡೆಗೆ ನೋಡುತ್ತ ಸ್ತಬ್ಧನಾಗಿ ಕುಳಿತನು.

ಕೊನೆಯ ರಾಜಕುಮಾರಿ ಸಣ್ಣಕ್ಕ ಅವನಿಗೆ ಸಮಾಧಾನ ಹೇಳುತ್ತ "ನಿನಗೆ ನಿನ್ನ ಹೆಂಡತಿ ಮಕ್ಕಳು ಸಿಗುವ ಯೋಗವಿದ್ದರೆ ಎಂದೋ ಒಂದು ದಿನ ಸಿಕ್ಕೇ ಸಿಗುತ್ತಾರೆ. ನಾವೂ ಈ ವಿಷಯದಲ್ಲಿ



ಸುಮ್ಮನಾದೆವು ಅಂದುಕೊಳ್ಳಬೇಡ. ನಮ್ಮಿಂದಾಗುವು ದನ್ನೆಲ್ಲಾ ನೋಡುತ್ತೇವೆ. ನಿನ್ನನ್ನು ಹೀಗೆ ಬಿಟ್ಟು ಕೈಕಟ್ಟಿ ಕೂಡುವುದಿಲ್ಲ. ಧೈರ್ಯವಾಗಿರು" ಎಂದು ಹೇಳಿದಳು. ಈ ರಾಜಕುಮಾರಿಯರಿಗೆ ಅಬ್ದುಲ್ ಕದ್ದೂಸ್ ಎಂಬ ಸೋದರ ಮಾವನೊಬ್ಬನಿದ್ದನು. ಅವನು ವರುಷಕ್ಕೆ ಒಂದು ಸಾರಿ ತನ್ನ ಸೋದರ ಸೊಸೆಯಂದಿರನ್ನು ನೋಡಲು ಬರುವನು. ಆತನ ಅಗತ್ಯ ಬಿದ್ದು ಕರೆಯಬೇಕಾದರೆ ಒಂದು ಬಗೆಯ ಗುಗ್ಗುಳವನ್ನು ಬೆಂಕಿಗೆ ಹಾಕಬೇಕು. ಆ ಗುಗ್ಗುಳವು ಹಿರಿಯ ರಾಜಕುಮಾರಿಯ ಹತ್ತಿರವಿದ್ದಿತು. ಅವಳು ಆ ಗುಗ್ಗುಳವನ್ನು ತೆಗೆದು ಬೆಂಕಿಗೆ ಹಾಕಿದ ಕೂಡಲೇ ದೊಡ್ಡ ಸುಳಿಗಾಳಿ ಬೀಸಿತು. ಅದು ನಿಂತು ಹೋದ ಕೂಡಲೇ ಬಿಳಿಯ ಆನೆಯ ಮೇಲೆ ಏರಿಕೊಂಡು ಅಬ್ದುಲ್ ಕದ್ದೂಸ್ ಅಲ್ಲಿಗೆ ಬಂದನು.

"ನಾನು ಬಂದು ಒಂದು ವರ್ಷ ಆಯಿತು. ನಾಳೆ ಹೊರಟು ಬರಬೇಕೆಂತಲೇ ಇದ್ದೆ. ಅಷ್ಟರಲ್ಲಿ ನೀವೇ ಕರೆದು ಬಿಟ್ಟಿರಿ. ಅಂತಲೇ ಹೊರಟು ಬಂದಿದ್ದೇನೆ. ಏನೋ ವಿಶೇಷವಿರಬೇಕು. ಏನದು? ಹೇಳಿರಿ" ಎಂದು ಅಬ್ದುಲ್ ಕದ್ದೂಸ್ ರಾಜ ಕುಮಾರಿಯರನ್ನು ಕೇಳಿದನು.

"ಮತ್ತೇನಿಲ್ಲ ಮಾವಯ್ಯಾ. ನಿಮ್ಮಿಂದ ನಮಗೆ ಒಂದು ಸಹಾಯವಾಗಬೇಕಿತ್ತು" ಎಂದರು ರಾಜ ಕುಮಾರಿಯರು.

ಅವರು ಅವನಿಗೆ ಹಸನ್ನನ್ನು ತೋರಿಸಿ ಅವನ ಕಥೆಯನ್ನೆಲ್ಲಾ ವಿವರವಾಗಿ ಹೇಳಿ, "ಮಾವಯ್ಯಾ, ಈಗ ನಮ್ಮ ಪ್ರೀತಿಯ ತಮ್ಮ ಈ ಹಸನ್ ವಾಕ್ ವಾಕ್ ದ್ವೀಪಗಳಿಗೆ ಹೋಗುವ ದಾರಿಯನ್ನು ನೀವೇ ಹೇಳಬೇಕು" ಎಂದರು.

ಅಬ್ದುಲ್ ಕದ್ದೂಸ್ ಮುಖದ ಮೇಲೆ ಬೆರಳು ತಡವಿಕೊಂಡು ತಲೆತಗ್ಗಿಸಿ ದೀರ್ಘಾಲೋಚನೆ ಮಾಡಿ ಏನೇನೋ ಗುಣಿಸಿಕೊಂಡು ಕಡೆಗೆ, "ಉಪಯೋಗ ವಿಲ್ಲ, ನಿಮ್ಮ ತಮ್ಮನು ಅಸಾಧ್ಯವಾದ ಕಾರ್ಯಕ್ಕೆ ತಲೆ ಹಾಕಿದ್ದಾನೆ. ಅವನು ವಾಕ್ ವಾಕ್ ದ್ವೀಪ ಗಳನ್ನು ಸೇರಲು ಸಾಧ್ಯವಿಲ್ಲ. ಎಂದಿಗೂ ಸಾಧ್ಯವಿಲ್ಲ" ಎಂದು ಹೇಳಿಬಿಟ್ಟನು.

"ಈ ಮಾತನ್ನು ಅವನ ಬುದ್ಧಿಗೆ ಅಂಟುವ ಹಾಗೆ ನಿಮ್ಮ ಬಾಯಿಯಿಂದಲೇ ಸ್ವಲ್ಪ ಸಮಾಧಾನ ಹೇಳಿರಿ ಮಾವಯ್ಯಾ. ಇಲ್ಲದಿದ್ದರೆ ಇವನು ಸಾಯು ತ್ತಾನೆ. ಹಾಗಾಗಿ ಬಿಟ್ಟರೆ ನಮಗೆ ಎಂದೆಂದಿಗೂ ದುಃಖವೇ" ಎಂದರು ರಾಜಕುಮಾರಿಯರು.

ಅಬ್ದುಲ್ ಕದ್ದೂಸ್ ಹಸನ್ನನ್ನು ನೋಡಿ, "ಮನಸ್ಸುಕೊಟ್ಟು ಕೇಳಪ್ಪಾ. ಧೂಮಕೇತುಗಳೂ, ಸಂಚಾರ ಗ್ರಹಗಳೂ ಸಹಾ ನಿನ್ನನ್ನು ವಾಕ್ ವಾಕ್ ದ್ವೀಪಗಳಿಗೆ ಸೇರಿಸಲಾರವು. ಆ ದ್ವೀಪಗಳನ್ನು ಪಾಲಿಸುವವನು ಗಂಧರ್ವ ಚಕ್ರವರ್ತಿಯಾದ ಭದ್ರು. ಗುಂಪು ಗುಂಪಾಗಿರುವ ಸೈನಿಕ ಕನ್ಯೆಯರೇ ಆ ದ್ವೀಪ ಗಳನ್ನು ರಕ್ಷಿಸಿಕೊಂಡಿರುವವರು. ಸಪ್ತ ಸಮುದ್ರ

ಗಳನ್ನು ದಾಟಿದ ಹೊರತು ಅದನ್ನು ತಲಪಲು ಸಾಧ್ಯವಿಲ್ಲ. ಆದುದರಿಂದ ನೀನು ಆ ಪ್ರಯತ್ನವನ್ನು ಬಿಟ್ಟು ನಿನ್ನ ಅಕ್ಕಂದಿರೊಂದಿಗೆ ಸುಖವಾಗಿ ಇಲ್ಲಿಯೇ ಕಾಲಕ್ಷೇಪ ಮಾಡಿಕೊಂಡಿರು. ಇಲ್ಲದ ಹೊಲ್ಲದ ಅಪಾಯಗಳನ್ನು ಏಕೆ ತಲೆಯ ಮೇಲೆ ಹಾಕಿಕೊಳ್ಳುತ್ತೀ?" ಎಂದು ಹಿತವನ್ನು ಹೇಳಿದನು.

ಆ ಮಾತುಗಳನ್ನು ಕೇಳಿ ಹಸನ್ನನ ಮುಖವು ಕಂದಿಹೋಯಿತು. ಆತನು ಬಾಯಿತೆರೆದು ಅಳುತ್ತಾ ಹಾಗೆಯೇ ಹಿಮ್ಮುಗುಚಿ ಬಿದ್ದನು. ಅವನ ಪರಿತಾಪ ಸ್ಥಿತಿಯನ್ನು ನೋಡಿ ಅಬ್ದುಲ್ ಕದ್ದೂಸನ ಮನಸ್ಸು ಕರಗಿ ನೀರಾಯಿತು. ಹಸನ್ನನಿಗೆ ಎಚ್ಚರ ಬಂದ ಕೂಡಲೇ ಅವನ ಭುಜದ ಮೇಲೆ ತಟ್ಟುತ್ತ, "ನಿನ್ನನ್ನು ಹೀಗೇ ಬಿಡಲು ನನಗೆ ಮನಸ್ಸು ಒಪ್ಪುವುದಿಲ್ಲಪ್ಪಾ. ಏನಾದರೂ ದಾರಿ ಇರುವುದೋ ನೋಡೋಣ, ನನ್ನ ಹಿಂದೆ ಬರುತ್ತೀಯಾ?" ಎಂದು ಕೇಳಿದನು.

ಹಸನ್ನನಿಗೆ ಮತ್ತೆ ಜೀವ ಚೇತರಿಸಿದಂತಾಗಿ, ಉತ್ಸಾಹದಿಂದ ಹಾರಿ ನಿಂತು, ಆ ವೃದ್ಧ ಅಬ್ದುಲ್ ಕದ್ದೂಸನ ಹಿಂದೆಯೇ ಹೋದನು. ಇಬ್ಬರೂ ಬಿಳಿಯಾನೆಯ ಮೇಲೆ ಹತ್ತಿ ಕುಳಿತರು. ಕದ್ದೂಸ್ ಆನೆಯ ಕಿವಿಯಲ್ಲಿ ಏನೋ ಹೇಳಿದನು. ಕೂಡಲೇ ಆನೆ ಆಕಾಶದ ಮೇಲೆ ಎದ್ದು ಗಾಳಿಯಲ್ಲಿ ತೇಲುತ್ತಾ ಅದ್ಭುತವಾದ ವೇಗವನ್ನು ವಹಿಸಿ ಸಾಗಿ ಹೋಗಿ ನೀಲ ಪರ್ವತದ ಮೇಲೆ ಕೆಳಗಿಳಿಯಿತು. ಆ ಪರ್ವತದಲ್ಲಿ ದೊಡ್ಡದೊಂದು ಗುಹೆಯೂ, ಅದಕ್ಕೆ ನೀಲ ಬಣ್ಣದ ಉಕ್ಕಿನ ಬಾಗಿಲುಗಳೂ ಇದ್ದುವು. ವೃದ್ಧ ಕದ್ದೂಸ್ ಆ ಬಾಗಿಲನ್ನು ತಟ್ಟಿದ ಕೂಡಲೇ ನೀಲ ಛಾಯೆಯ ನಿಗ್ರೋನಂಥ ಮನುಷ್ಯನು ಕೈಯಲ್ಲಿ ನೀಲಖಡ್ಗ, ನೀಲ ಢಾಲುಗಳನ್ನು ಧರಿಸಿಕೊಂಡು ಬಂದನು. ವೃದ್ಧನು ರೆಪ್ಪೆ ಮುಚ್ಚುವುದರೊಳಗೆ




ಅವನ ಕತ್ತಿ ಢಾಲುಗಳನ್ನು ಎಳೆದು ಕಿತ್ತು ಆಚೆಗೆ ಬಿಸುಟನು. ಕೂಡಲೇ ನೀಗ್ರೋನು ಬದಿಗೆ ಸರಿದು ಅವರಿಗೆ ದಾರಿ ಬಿಟ್ಟನು. ಇಬ್ಬರೂ ಆ ಗುಹೆಯೊಳಗೆ ಪ್ರವೇಶಿಸಿದ ಮೇಲೆ ಅವನು ಬಾಗಿಲು ಮುಚ್ಚಿಬಿಟ್ಟನು.

ಗುಹೆಯ ದಾರಿಯಲ್ಲಿ ಅವರಿಬ್ಬರೂ ಸುಮಾರು ಅರ್ಧ ಹರದಾರಿಯಷ್ಟು ಹೋದಮೇಲೆ ಎರಡು ಬಾಗಿಲುಗಳು ಕಂಡವು. ಎರಡೂ ಬಂಗಾರದ ಬಾಗಿಲುಗಳೇ. ಅಬ್ದುಲ್ ಕದ್ದೂಸ್ ಅದನ್ನು ದೂಡಿ ಒಳಗೆ ಹೋದನು. ಅವನು ಹೇಳಿದ ಹಾಗೆ ಹಸನ್ ಹೊರಗೇ ಕಾದು ನಿಂತನು.

ಒಂದು ಗಂಟೆ ಕಳೆದ ಮೇಲೆ ಕದ್ದೂಸ್ ಒಂದು ಕುದುರೆಯನ್ನು ತೆಗೆದುಕೊಂಡು ಹೊರಗೆ ಬಂದನು. ಕುದುರೆಯೂ ಅದರ ಜೂಲು ಬಾಲಗಳು ಕೂಡಾ ನೀಲ ಬಣ್ಣದಲ್ಲೇ ಇದ್ದುವು. ಕದ್ದೂಸ್ ಹಸನ್ನನ್ನು ಆ ಕುದುರೆಯ ಮೇಲೆ ಏರಿಕೊಳ್ಳಲು ಹೇಳಿ, ಎರಡನೇ



ಬಾಗಿಲನ್ನು ತೆರೆದನು. ಆ ಬಾಗಿಲಿನಾಚೆಗೆ ನೀಲಾಕಾಶದ ಹೊರತು ಮತ್ತೇನೂ ಕಾಣಲಿಲ್ಲ.

"ಅಪ್ಪಾ ಹಸನ್! ಕಡೇ ಬಾರಿ ಚೆನ್ನಾಗಿ ಆಲೋಚನೆಮಾಡಿಕೋ. ನಿನಗೆ ಘೋರವಾದ ಪ್ರಾಣಾಪಾಯಗಳು ಎದುರಾದಾವು. ಅವುಗಳನ್ನು ಎದುರಿಸಿ ಪಾರಾಗಬಲ್ಲೆಯಾ ? ಅಥವಾ ನಿನ್ನ ಅಕ್ಕಂದಿರ ಬಳಿಗೆ ಹಿಂದಿರುಗಿ ಹೋಗುವಿಯಾ? " ಎಂದು ಕದ್ದೂಸ್ ಕೇಳಿದನು.

"ಸಾವಿರ ಸಾವುಗಳು ಬಂದರೂ ಎದುರಿಸುತ್ತೇನೆ." ಎಂದನು ಹಸನ್. "ನಿನ್ನನ್ನು ಹೊತ್ತು, ಹೆತ್ತು ಸಾಕಿದ ತಾಯಿಗಾಗಿಯಾದರೂ ಹಿಂದಿರುಗಿ ಹೋಗಲಾರೆಯಾ ಕಂದಾ? " ಎಂದು ವೃದ್ಧ ಕದ್ದೂಸ್ ಪುನಃ ಕೇಳಿದನು.

"ನನ್ನ ಹೆಂಡತಿಯನ್ನೂ, ಮಕ್ಕಳನ್ನೂ ಕರೆದುಕೊಳ್ಳದೆ ನನ್ನ ತಾಯಿಯ ಬಳಿಗೆ ಹೋಗಲಾರೆ". ಎಂದನು ಹಸನ್.

"ಹಾಗಾದರೆ ಸರಿಯಪ್ಪ. ನಿನ್ನ ಧೈರ್ಯ ನಿನ್ನನ್ನು ಕಾಪಾಡಬೇಕು. ಇಕೋ, ಈ ಕಾಗದ ತೆಗೆದುಕೋ, ಕುದುರೆಯನ್ನು ನೀನು ನಡೆಯಿಸಬೇಕಾಗಿಲ್ಲ. ಎಲ್ಲಿಗೆ ಹೋಗಬೇಕೆಂದು ಅದಕ್ಕೆ ಗೊತ್ತು. ಅದು ನಿನ್ನನ್ನು ಕಪ್ಪು ಪರ್ವತಕ್ಕೆ ಒಯ್ದು ಇಳಿಸುತ್ತದೆ. ಕಪ್ಪು ಗುಹೆಯ ಬದಿಯಲ್ಲಿ ಇಳಿದು ಈ ಕುದುರೆಯನ್ನು ಗುಹೆಯೊಳಗೆ ಕಳುಹಿಸು. ಒಬ್ಬ ಮುದುಕ ಹೊರಗೆ ಬರುತ್ತಾನೆ. ಅವನು ಒಟ್ಟು ಕಪ್ಪಾಗಿರುತ್ತಾನೆ. ಅವನಿಗೆ ಮೊಣಕಾಲಿಗಿಂತಲೂ ನೀಳವಾದ ಗಡ್ಡವಿರುತ್ತದೆ. ಅವನಿಗೆ ನಮಸ್ಕಾರಮಾಡಿ ಈ ಕಾಗದ ಕೊಡು. ಅವನು ಪಕ್ಷಿಗಳಿಗೆ ರಾಜ. ನನಗಿಂತ ಮೇಲಿನವನು. ಅವನ ಸಹಾಯವಿಲ್ಲದೆ ನಿನ್ನ ಕೆಲಸ ಆಗಲಾರದು. ನೀನು ಹೇಗಾದರೂ ಅವನ ಮೆಚ್ಚುಗೆಗಳಿಸಬೇಕು" ಎಂದು ಹೇಳಿ ಅಬ್ದುಲ್‌ಕದ್ದೂಸ್ ಗುಹೆಯೊಳಗೆ ಪ್ರವೇಶಿಸಿದನು.

ಅಬ್ದುಲ್‌ಕದ್ದೂಸ್ ಕೊಟ್ಟ ನೀಲೀ ಕುದುರೆಯನ್ನು ಏರಿ ಹಸನ್ ಕುಳಿತದ್ದೇ ತಡ, ಕುದುರೆ ಬಾಣದ ಹಾಗೆ ಮುಂಗಾಲು ಹಿಂಗಾಲುಗಳನ್ನು ನೆಟ್ಟಗೆ ಚಾಚಿ, ರೊಂಯ್ಯನೆ ಸಾಗಿತು. ಅದು ಹತ್ತು ದಿನಗಳವರೆಗೆ ಹಾಗೆಯೇ ಸಾಗಿ, ಹತ್ತು ವರ್ಷಗಳ ಪ್ರಯಾಣ ಮುಗಿಸಿ ಒಂದು ಕಪ್ಪು ಪರ್ವತ ಪಂಕ್ತಿಯನ್ನು ಸೇರಿತು. ಆ ಪರ್ವತದ ಸಾಲು ಮೂಡು ಪಡು ದಿಕ್ಕುಗಳಿಗೆ ವ್ಯಾಪಿಸಿಕೊಂಡಿದ್ದಿತು. ನೀಲಿ ಕುದುರೆ ತೀಕ್ಷ್ಣ ಧ್ವನಿಯಿಂದ ಕೆನೆದು ಆ ಪರ್ವತ ಪಂಕ್ತಿಯ ಮೇಲೆ ಇಳಿದ ಕೂಡಲೇ, ಸಾವಿರಾರು ಕಪ್ಪು ಕುದುರೆಗಳು ಅದನ್ನು ಸುತ್ತಿಮುತ್ತಿದುವು. ನೀಲಿ ಕುದುರೆ ಅವುಗಳ ನಡುವಿನಲ್ಲಿ ನಡೆದು ಒಂದು ಕಪ್ಪು ಗುಹೆಯನ್ನು ಸಮೀಪಿಸಿತು. ಗುಹೆಯ ಬಾಗಿಲ ಹತ್ತಿರ ಹಸನ್ನನ್ನು ಇಳಿಸಿ ಕುದುರೆ ಗುಹೆಯೊಳಗೆ ಹೊರಟುಹೋಯಿತು. ಗುಹೆಯ ಹೊರಗೆ ಹಸನ್ ಒಂದು ಗಂಟೆ ಹೊತ್ತು

ಕಾದು ನಿಂತ ಮೇಲೆ ಗೌರವನೀಯನಂತೆ ಕಾಣುವ ಒಬ್ಬ ವೃದ್ಧನು ಗುಹೆಯೊಳಗಿನಿಂದ ಹೊರಗೆ ಬಂದನು. ಅವನು ಕಾರ್ಗಪ್ಪಾಗಿದ್ದುದು ಮಾತ್ರವಲ್ಲದೆ, ಅವನ ದುಸ್ತುಗಳೂ ಪೂರ್ತಿ ಕಪ್ಪೇ. ಆದರೆ ಸೊಂಟದ ಕೆಳಗಿನವರೆಗೂ ಜೋಲಾಡುವ ಅವನ ಗಡ್ಡವು ಮಾತ್ರ ಬೆಳ್ಳಂ ಬೆಳ್ಳಗಾಗಿ ಪ್ರಕಾಶ ಹೊರಡಿ ಸುತ್ತಿದ್ದಿತು. ಇವನು ಸಾಕ್ಷಾತ್ ಸುಲೇಮಾನನ ಮಗನಾದ ಅಲೀ. ಹಸನ್ ಅವನ ಮುಂದೆ ಭಕ್ತಿಯಿಂದ ಮೊಣಕಾಲೂರಿ ತಲೆ ಬಗ್ಗಿಸಿ ನಮಸ್ಕಾರ ಮಾಡಿದನು. ತರುವಾಯ ಅಬ್ದುಲ್‌ಕದ್ದೂಸ್ ಕೊಟ್ಟ ಪತ್ರವನ್ನು ಅಲೀಗೆ ಒಪ್ಪಿಸಿದನು. ಅಲೀ ಆ ಕಾಗದವನ್ನು ತೆಗೆದುಕೊಂಡು ಮೌನವಾಗಿ ಗುಹೆಯೊಳಗೆ ಹೋದನು.

ಬಹಳ ಹೊತ್ತು ಕಳೆಯಿತು. ಹಸನ್ ನಿರಾಶೆಯ ಅಂಚಿಗೆ ಬರುತ್ತಿದ್ದಾಗ, ವೃದ್ಧನು ಬಿಳೀ ದುಸ್ತುಗಳನ್ನು ಧರಿಸಿ ಗುಹೆಯ ಬಾಗಿಲ ಹತ್ತಿರ ಬಂದು, ಒಳಗೆ ಬರುವಂತೆ ಹಸನ್ನಿಗೆ ಸನ್ನೆಮಾಡಿ, ತನ್ನೊಂದಿಗೆ ಅವನನ್ನು ಗುಹೆಯೊಳಗಿನ ಒಂದು ಚಾವಡಿಗೆ ಕರೆದುಕೊಂಡು ಹೋದನು. ಅಲ್ಲಿಯ ಗೋಡೆಕಂಬಗಳಲ್ಲಿ ಅಲ್ಲಲ್ಲಿ ರತ್ನಗಳನ್ನು ಹೊದಗಿಸಲಾಗಿತ್ತು. ಅಲ್ಲಿ ಕೆಳಗೆ ನಾಲ್ಕು ಮೂಲೆಗಳಲ್ಲಿ ತಿವಾಸಿಯ ಮೇಲೆ ದಿಂಬಿಗೆ ಆತುಕೊಂಡು ನಾಲ್ಕುಮಂದಿ ಜ್ಞಾನಿಗಳು ಕುಳಿತಿದ್ದರು. ಅವರ ಪಕ್ಕದಲ್ಲಿ ಅಟ್ಟ ಅಟ್ಟೆಯಾಗಿ ಗ್ರಂಥಗಳನ್ನು ಪೇರಿಸಿಡಲಾಗಿತ್ತು. ಚಾವಡಿಯ ಮಧ್ಯದಲ್ಲಿ ಮುದುಕ ಅಲೀಯ ಏಳುಮಂದಿ ಶಿಷ್ಯರು ಕುಳಿತಿದ್ದರು. ಇವರೆಲ್ಲ ಏನೋ ಬರೆಯುತ್ತಲೂ ಓದುತ್ತಲೂ ಇದ್ದರು.

ಅಲೀ ಬಂದ ಕೂಡಲೇ ಎಲ್ಲರೂ ಎದ್ದು ನಿಂತರು. ಅಲೀ ಚಾವಡಿಯ ಮಧ್ಯದಲ್ಲಿ ಕುಳಿತ ಕೂಡಲೇ ಎಲ್ಲರೂ ಅವನನ್ನು ಪರಿವೇಷ್ಟಿಸಿ ಕುಳಿತರು. ಅಲೀಯ ಸಲಹೆಯಂತೆ ಹಸನ್ ಅವರೆಲ್ಲರ ಮುಂದೆ ತನ್ನ ಪೂರ್ತಿ ಕಥೆಯನ್ನು ಹೇಳಿದನು. ಅದನ್ನು ಕೇಳಿ ಎಲ್ಲರೂ ತಮ್ಮೊಳಗೆ ಚರ್ಚಿಸಿಕೊಂಡು, ಕಡೆಗೆ ಹಸನ್ನನಿಗೆ ಸಹಾಯ ಮಾಡುವುದೇ ಒಳ್ಳೆಯದೆಂದು ವೃದ್ಧ ಅಲೀಗೆ ಸಲಹೆ ಮಾಡಿದರು.

ಅವರ ಸಲಹೆಯನ್ನು ಕೇಳಿ ಅಲೀ, "ನಿಜವೇ. ಆದರೆ ವಾಕ್‌ವಾಕ್ ದ್ವೀಪಗಳಿಗೆ ಹೋಗುವುದು ಸುಲಭವಲ್ಲವಷ್ಟೆ? ಅಲ್ಲಿಂದ ಹಿಂದಿರುಗಿ ಬರುವುದು ಇನ್ನೂ ಹೆಚ್ಚಿನ ಕಷ್ಟ. ಅಲ್ಲಿಯ ಯೋಧಕನ್ಯೆಯರಿಂದ ಅವನಿಗೆ ಬರುವ ಅಪಾಯಗಳನ್ನು ಹೇಳಬೇಕಾಗಿಲ್ಲ. ಈ ಹುಚ್ಚು ಹುಡುಗ ತನ್ನ ಹೆಂಡತಿಯನ್ನು ಹೇಗೆ ಸಂಧಿಸುವನೋ, ಸಂಧಿಸಿದರೂ ಹೇಗೆ ಹಿಂದಿರುಗುವನೋ ನನಗಂತೂ ಅರ್ಥವಾಗುವುದಿಲ್ಲ ಪಾಪ!" ಎಂದನು.

(ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೮೨ ಜೂಲೈ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.**



M. Natarajan

★



Prabhakar Mahadik

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಮೇ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಮಾರ್ಚಿ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಮಣ್ಣಿನಿಂದ ಮನೆಗೆ**

ಎರಡನೇ ಫೋಟೋ: **ಮನೆಯಿಂದ ಹೊರಗೆ**

ಕಳುಹಿಸಿದವರು: ಆರ್. ರಾಜಣ್ಣ, ಬೆಂಗಳೂರು-೧೦

ಬಹುಮಾನ ರೂ. ೨೫/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

ಜೆಮ್ಸ್‌ಗಳ ದೋಣಿ ಮಾಡುವೆ ನಾನು,
ಅದರಲಿ ಜೆಮ್ಸ್‌ಗಳ ತುಂಬುವೆನು..
ಸಮುದ್ರಾಟನ ಮಾಡುವೆನು, ಸಮುದ್ರಕ್ಕೂ ತಿನಿಸುವೆನು
ನಿಮಗೂ ಕೊಡುವೆನು, ನಾನೂ ತಿನ್ನುವೆನು.






ಜೆಮ್ಸ್‌ನಿಂದ ಪ್ರತಿ ನಿಮಿಷವೂ ರಸ ನಿಮಿಷ!

ಕ್ಯಾಡ್‌ಬರಿಸ್
ಚಾಕಲೇಟ್‌ಗಳು

ಕ್ಯಾಡ್‌ಬರೀ ಜೆಮ್ಸ್ ಇರುವುದೆ ಹಾಗೆ, ಸುಂದರ ಬಂಧುರ ಸ್ವಪ್ನದ ಹಾಗೆ.

OBM/8341

CHANDAMAMA (Kannada) MAY 1982 Regd. No. M. 5210




# ಇನ್ನು ಮೋಸಗೊಳಿಸಲು ಸಾಧ್ಯವಿಲ್ಲ!

## ಅಪ್ಪಟ ಪಾಪಿನ್ಸ್‌ಗಳಿಗೆ

ಈಗ ಬೆಳ್ಳಿ ಪಟ್ಟೆಗಳ ಹೊದಿಕೆಯಿದೆ!

ಮುದ್ದು ಮಕ್ಕಳೇ! ಇಗೋ ಇಲ್ಲಿದೆ ನಿಮಗೆ ಸಿಹಿ ಸಿಹಿ ಸುದ್ದಿ! ಇನ್ನು ಮುಂದೆ ಯಾರೂ ನಿಮ್ಮನ್ನು ಮೋಸಗೊಳಿಸುವಂತಿಲ್ಲ. ಆದರೆ ಒಂದು ಮಾತ್ರ ನೆನಪಿಟ್ಟುಕೊಳ್ಳಿರಿ. ಕೊಳ್ಳುವ ಮೊದಲು, ಪಾರ್ಲೆ ಪಾಪಿನ್ಸ್‌ನ ಬಣ್ಣ ಬಣ್ಣದ ಫಾಯಿಲ್ ಪ್ಯಾಕ್‌ನ ಮೇಲೆ ಬೆಳ್ಳಿ ಪಟ್ಟೆಗಳಿವೆಯೋ ಎಂದು ನೋಡಿಕೊಳ್ಳಿರಿ. ಆಮೇಲೆ ಪಾಪಿನ್ಸ್ ಬಾಯಿಯಲ್ಲಿ ಹಾಕಿಕೊಂಡು ಅದರ ಹಣ್ಣಿನಂಥ ಸ್ವಾದದ ಮೋಜು ನೋಡಿರಿ!




**ಪಾರ್ಲೆ ಪಾಪಿನ್ಸ್**

ಈಗ,
ನಕಲಿಗಾರರು ನಿಮ್ಮನ್ನು
ಮೋಸಗೊಳಿಸುವಂತಿಲ್ಲ.

everest/81/PP/101/kn